CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಡಿಸೆಂಬರ್ ೩೦, ೨೦೦೪ (ಪುಷ್ಯ ೯, ಶಕ ವರ್ಷ ೧೯೨೬) | ಸಂಚಿಕೆ ೫೨ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

### ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ಬಳ್ಳಾರಿ ಜಿಲ್ಲೆ

**ಟೆಂಡರ್ ಪ್ರಕಟಣೆ**

**ನಂ. ಡಿಎಎಂ.ಸಂ.ವಿ.1 ಮತ್ತು 2: ಹೊಸಪೇಟೆ: ಟೆಂಡರ್.4:2004-05/502-566, ದಿನಾಂಕ: 10ನೇ ಡಿಸೆಂಬರ್ 2004**

ಕರ್ನಾಟಕ ರಾಜ್ಯಪಾಲರ ಪರವಾಗಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ಬಳ್ಳಾರಿ ಜಿಲ್ಲೆ ಇವರಿಂದ ಈ ಕೆಳಕಂಡ ಕಾಮಗಾರಿ ಕೆಲಸಗಳಿಗೆ ಕರ್ನಾಟಕ ಸರ್ಕಾರದ ಲೋಕೋಪಯೋಗಿ ಇಲಾಖೆಯಲ್ಲಿ 2000-2005ನೇ ಅವಧಿಗೆ ನೋಂದಾಯಿಸಿದ ಗುತ್ತಿಗೆದಾರರಿಂದ ಐಟಂವಾರು ದರಗಳನ್ನು ನಮೂದಿಸಿದ ಟೆಂಡರ್‌ಗಳನ್ನು ದ್ವಿಪ್ರತಿಯಲ್ಲಿ ನಿಗದಿತ ಇ.ಎಂ.ಡಿ. ಹಣದೊಂದಿಗೆ ಮೊಹರಾದ ಲಕೋಟೆಯ ಮೇಲೆ ಕೆಲಸದ ಹೆಸರನ್ನು ನಮೂದಿಸಿದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ದಿನಾಂಕ: 12.1.2005 ರಂದು ಭಾರತೀಯ ಕಾಲಮಾನ ಮಧ್ಯಾಹ್ನ 4.00 ಘಂಟೆಯವರೆಗೆ ಸ್ವೀಕರಿಸಲಾಗುವುದು. ಸಾಧ್ಯವಾದಲ್ಲಿ ಅದೇ ದಿವಸ ಟೆಂಡರ್‌ಗಳನ್ನು ಅಪರಾಹ್ನ 4.30 ಘಂಟೆಯ ನಂತರ ಗುತ್ತಿಗೆದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಕೆಳಕಂಡ ಕೆಲಸಗಳಿಗೆ ಟೆಂಡರ್ ಫಾರಂಗಳಿಗಾಗಿ ನಿಗದಿತ ಟೆಂಡರ್ ಫಾರಂ ಶುಲ್ಕದೊಂದಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 30.12.2004 ರ ಸಾಯಂಕಾಲ 5.30 ರವರೆಗೆ ಟೆಂಡರ್ ಫಾರಂ ಶುಲ್ಕವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ. ಖಾಲಿ ಟೆಂಡರ್ ಫಾರಂಗಳನ್ನು ದಿನಾಂಕ: 3.1.2005 ರಿಂದ 5.1.2005 ರವರೆಗೆ ವಿತರಿಸಲಾಗುವುದು.

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಟೆಂಡರ್‌ಗೆ ಇಡಲಾದ ಮೊತ್ತ | ಇ.ಎಂ.ಡಿ. (ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರಂ ದರ ರೂ. (ತೆರಿಗೆ ಸೇರಿಕೊಂಡು ಹಿಂದಿರುಗಿಸಲಾಗು ವುದಿಲ್ಲ) (KST 8%+ 4% SC on KST) | ಗುತ್ತಿಗೆದಾರರ ದರ್ಜೆ | ಕಾಮಗಾರಿ ಪೂರ್ಣ ಗೊಳಿಸುವ ಅವಧಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| | ರಾಜ್ಯ ಸರ್ಕಾರದ ಅನುದಾನದ ಯೋಜನೆ | | | | | |
| 1 | ಗದಗ ಜಿಲ್ಲೆ, ಶಿರಹಟ್ಟಿ ತಾಲ್ಲೂಕು ಲಕ್ಷ್ಮೇಶ್ವರದಲ್ಲಿರುವ ಶ್ರೀ ಸೋಮೇಶ್ವರ ದೇವಾಲಯದ ಸಂಕೀರ್ಣದಲ್ಲಿರುವ ಉಪ ದೇವಾಲಯ ಸಂಖ್ಯೆ ಟಿ-13, ಟಿ-14 ಟಿ-15ರ ಸಂರಕ್ಷಣಾ ಕೆಲಸ | 11,60,808/- | 17,450/- | ರೂ. 1,500/- | ಎರಡನೆಯ ದರ್ಜೆ ಹಾಗೂ ಮೇಲ್ಪಟ್ಟು | 12 ತಿಂಗಳು (ಮಳೆಗಾಲ ಬಿಟ್ಟು) |
| 2 | ದಕ್ಷಿಣ ಕನ್ನಡ ಜಿಲ್ಲೆ, ಸುಳ್ಯ ತಾಲ್ಲೂಕು, ಬಳಪಾ ಗ್ರಾಮದಲ್ಲಿರುವ ಶ್ರೀ ತ್ರೀಶೂಲಿನಿ (ಶ್ರೀ ದುರ್ಗಾಪರಮೇಶ್ವರಿ) ದೇವಸ್ಥಾನದ ಸಂರಕ್ಷಣಾ ಕೆಲಸ | 54,18,175/- | 54,200/- | ರೂ. 2000/- | ಮೊದಲನೇ ದರ್ಜೆ | 15 ತಿಂಗಳು (ಮಳೆಗಾಲ ಬಿಟ್ಟು) |
| 3 | ಉತ್ತರ ಕನ್ನಡ ಜಿಲ್ಲೆ, ಕುಮಟಾ ತಾಲ್ಲೂಕು, ಧಾರೇಶ್ವರದಲ್ಲಿರುವ ಶ್ರೀಧಾರನಾಥ ದೇವಸ್ಥಾನದ ಸಂರಕ್ಷಣಾ ಕೆಲಸ | 7,10,772/- | 14,220/- | ರೂ. 1000/- | ಮೂರನೆಯ ದರ್ಜೆ ಹಾಗೂ ಮೇಲ್ಪಟ್ಟು | 9 ತಿಂಗಳು (ಮಳೆಗಾಲ ಬಿಟ್ಟು) |

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಟೆಂಡರ್‌ಗೆ ಇಡಲಾದ ಮೊತ್ತ | ಇ.ಎಂ.ಡಿ. (ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರಂ ದರ ರೂ. (ತೆರಿಗೆ ಸೇರಿಕೊಂಡು ಹಿಂದಿರುಗಿಸಲಾಗುವುದಿಲ್ಲ) (KST 8%+ 4% SC on KST) | ಗುತ್ತಿಗೆದಾರರ ದರ್ಜೆ | ಕಾಮಗಾರಿ ಪೂರ್ಣಗೊಳಿಸುವ ಅವಧಿ |
|---|---|---|---|---|---|---|
| 4 | ಬಿಜಾಪುರ ಜಿಲ್ಲೆ, ಬಸವನಬಾಗೇವಾಡಿ ತಾಲ್ಲೂಕು, ಮುತ್ತಗಿ ಗ್ರಾಮದ ಶ್ರೀ ರಾಮಲಿಂಗೇಶ್ವರ ದೇವಸ್ಥಾನದ ಸಂರಕ್ಷಣಾ ಕೆಲಸ | 8,95,937/- | 18,000/- | ರೂ. 1000/- | ಮೂರನೆಯ ದರ್ಜೆ ಹಾಗೂ ಮೇಲ್ಪಟ್ಟು | 9 ತಿಂಗಳು (ಮಳೆಗಾಲ ಬಿಟ್ಟು) |
| | **ಹನ್ನೊಂದನೇ ಹಣಕಾಸು ಯೋಜನೆ ಅನುದಾನದ ಅಡಿಯಲ್ಲಿ** | | | | | |
| 5 | ಬಾಗಲಕೋಟೆ ಜಿಲ್ಲೆ, ಬಾದಾಮಿ ತಾಲ್ಲೂಕು, ನಂದಿಕೇಶ್ವರದಲ್ಲಿರುವ ಶ್ರೀ ಚಿಕ್ಕಮಹಾಕೂಟೇಶ್ವರ ಬಳಿ ಇರುವ ಶ್ರೀ ಅಡಕೇಶ್ವರ ದೇವಾಲಯದ ಸಂರಕ್ಷಣಾ ಕೆಲಸ | 14,33,316/- | 21,500/- | ರೂ. 1500/- | ಎರಡನೆಯ ದರ್ಜೆ ಹಾಗೂ ಮೇಲ್ಪಟ್ಟು | 9 ತಿಂಗಳು (ಮಳೆಗಾಲ ಬಿಟ್ಟು) |
| 6 | ಗದಗ ಜಿಲ್ಲೆ, ಶಿರಹಟ್ಟಿ ತಾಲ್ಲೂಕು, ಲಕ್ಷ್ಮೇಶ್ವರದಲ್ಲಿರುವ ಶ್ರೀ ಸೋಮೇಶ್ವರ ದೇವಾಲಯದ ಸಂಕೀರ್ಣದಲ್ಲಿರುವ ಉಪ ದೇವಾಲಯದ ಸಂಖ್ಯೆ ಟಿ-1 ರಿಂದ ಟಿ-4ರ ಸಂರಕ್ಷಣಾ ಕೆಲಸ | 22,87,905/- | 23,000/- | ರೂ. 1500/- | -”- | 12 ತಿಂಗಳು (ಮಳೆಗಾಲ ಬಿಟ್ಟು) |
| 7 | ಮಂಡ್ಯ ಜಿಲ್ಲೆ, ಶ್ರೀರಂಗಪಟ್ಟಣ ತಾಲ್ಲೂಕು, ಅರಕೆರೆ ಗ್ರಾಮದಲ್ಲಿರುವ ಶ್ರೀ ಲಕ್ಷ್ಮೀನರಸಿಂಹಸ್ವಾಮಿ ದೇವಸ್ಥಾನದ ಸಂರಕ್ಷಣಾ ಕೆಲಸ | 13,28,421/- | 19,950/- | ರೂ. 1500/- | -”- | 9 ತಿಂಗಳು (ಮಳೆಗಾಲ ಬಿಟ್ಟು) |
| 8 | ಬೆಳಗಾಂ ಜಿಲ್ಲೆಯ, ಬೈಲಹೊಂಗಲ ತಾಲ್ಲೂಕು, ದೇವರ ಸೀಗೇಹಳ್ಳಿಯಲ್ಲಿರುವ ಶ್ರೀ ಸೂರ್ಯ ದೇವಸ್ಥಾನದ ಸಂರಕ್ಷಣಾ ಕೆಲಸ | 17,85,632/- | 26,800/- | ರೂ. 1500/- | -”- | 12 ತಿಂಗಳು (ಮಳೆಗಾಲ ಬಿಟ್ಟು) |
| 9 | ಮಂಡ್ಯ ಜಿಲ್ಲೆಯ, ನಾಗಮಂಗಲ ತಾಲ್ಲೂಕು, ಬೆಳ್ಳೂರು ಗ್ರಾಮದಲ್ಲಿರುವ ಶ್ರೀ ಮೂಲಸಿಂಘೇಶ್ವರ ದೇವಸ್ಥಾನದ ಸಂರಕ್ಷಣಾ ಕೆಲಸ. | 5,77,470/- | 11,550/- | ರೂ. 1000/- | ಮೂರನೆಯ ದರ್ಜೆ ಹಾಗೂ ಮೇಲ್ಪಟ್ಟು | 6 ತಿಂಗಳು (ಮಳೆಗಾಲ ಬಿಟ್ಟು) |
| 10 | ಬೆಳಗಾಂ ಜಿಲ್ಲೆ, ಸವದತ್ತಿ ತಾಲ್ಲೂಕು, ಸವದತ್ತಿಯಲ್ಲಿರುವ ಪರಸಗಡ ಕೋಟೆಯ ಸಂರಕ್ಷಣಾ ಕೆಲಸ | 13,24,174/- | 19,900/- | ರೂ. 1500/- | ಎರಡನೆಯ ದರ್ಜೆ ಹಾಗೂ ಮೇಲ್ಪಟ್ಟು | 12 ತಿಂಗಳು (ಮಳೆಗಾಲ ಬಿಟ್ಟು) |
| 11 | ಬೆಳಗಾಂ ಜಿಲ್ಲೆ, ಬೈಲಹೊಂಗಲ ತಾಲ್ಲೂಕು, ಕಿತ್ತೂರಿನಲ್ಲಿರುವ ಕಿತ್ತೂರು ಕೋಟೆ ಸಂರಕ್ಷಣಾ ಕೆಲಸ | 7,47,236/- | 14,950/- | ರೂ. 1000/- | ಮೂರನೆಯ ದರ್ಜೆ ಹಾಗೂ ಮೇಲ್ಪಟ್ಟು | 9 ತಿಂಗಳು (ಮಳೆಗಾಲ ಬಿಟ್ಟು) |
| 12 | ಗದಗ ಜಿಲ್ಲೆ, ಶಿರಹಟ್ಟಿ ತಾಲ್ಲೂಕು ದೇವಿಹಾಳ ಗ್ರಾಮದಲ್ಲಿರುವ ಶ್ರೀಮಂತಗಡ ಕೋಟೆ ಸಂರಕ್ಷಣಾ ಕೆಲಸ | 9,95,603/- | 19,950/- | ರೂ. 1000/- | -”- | -”- |
| 13 | ಗದಗ ಜಿಲ್ಲೆ ಶಿರಹಟ್ಟಿ ತಾಲ್ಲೂಕು ಲಕ್ಷ್ಮೇಶ್ವರದಲ್ಲಿರುವ ಕಾಲಿಯಾ ಮಸಜಿದ ಸ್ಮಾರಕದ ಸಂರಕ್ಷಣಾ ಕೆಲಸ | 6,75,576/- | 13,550/- | ರೂ. 1000/- | -”- | -”- |
| 14 | ಬೆಂಗಳೂರು ನಗರ ಜಿಲ್ಲೆ, ಬೆಂಗಳೂರಿನ ಕಸ್ತೂರಬಾ ರಸ್ತೆಯಲ್ಲಿರುವ ಸರ್ಕಾರಿ ವಸ್ತು ಸಂಗ್ರಹಾಲಯದ ಅಭಿವೃದ್ಧಿ ಕೆಲಸ | 10,67,772/- | 16,050/- | ರೂ. 1500/- | ಎರಡನೆಯ ದರ್ಜೆ ಹಾಗೂ ಮೇಲ್ಪಟ್ಟು | -”- |
| 15 | ಕೊಡಗು ಜಿಲ್ಲೆ, ಮಡಿಕೇರಿ ನಗರದಲ್ಲಿರುವ ಸರ್ಕಾರಿ ವಸ್ತು ಸಂಗ್ರಹಾಲಯದ ಅಭಿವೃದ್ಧಿ ಕೆಲಸ | 6,40,000/- | 16,000/- | ರೂ. 1000/- | ಮೂರನೆಯ ದರ್ಜೆ ಹಾಗೂ ಮೇಲ್ಪಟ್ಟು | -”- |
| 16 | ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ನಗರದಲ್ಲಿರುವ ಶಿವಪ್ಪನಾಯಕ ಅರಮನೆ ಹಾಗೂ ವಸ್ತು ಸಂಗ್ರಹಾಲಯದ ಅಭಿವೃದ್ಧಿ ಕೆಲಸ | 8,63,718/- | 17,300/- | ರೂ. 1500/- | ಎರಡನೆಯ ದರ್ಜೆ ಹಾಗೂ ಮೇಲ್ಪಟ್ಟು | -”- |

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಟೆಂಡರ್‌ಗೆ ಇಡಲಾದ ಮೊತ್ತ | ಇ.ಎಂ.ಡಿ. (ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರಂ ದರ ರೂ. (ತೆರಿಗೆ ಸೇರಿಕೊಂಡು ಹಿಂದಿರುಗಿಸಲಾಗು ವುದಿಲ್ಲ) (KST 8%+ 4% SC on KST) | ಗುತ್ತಿಗೆದಾರರ ದರ್ಜೆ | ಕಾಮಗಾರಿ ಪೂರ್ಣ ಗೊಳಿಸುವ ಅವಧಿ |
|---|---|---|---|---|---|---|
| 17 | ಮೈಸೂರು ಜಿಲ್ಲೆ, ಮೈಸೂರು ನಗರದಲ್ಲಿರುವ ಇರ್ವಿನ್ ರಸ್ತೆಯಲ್ಲಿರುವ ವೆಲ್ಲಿಂಗ್‌ಟನ್ ಭವನದ ಅಭಿವೃದ್ಧಿ ಕೆಲಸ | 5,19,916/- | 10,400/- | ರೂ. 1000/- | ಮೂರನೆಯ ದರ್ಜೆ ಹಾಗೂ ಮೇಲ್ಪಟ್ಟು | 6 ತಿಂಗಳು (ಮಳೆಗಾಲ ಬಿಟ್ಟು) |
| 18 | ಬಳ್ಳಾರಿ ಜಿಲ್ಲೆ, ಹೂವಿನ ಹಡಗಲಿ ತಾಲ್ಲೂಕು, ಹೂವಿನಹಡಗಲಿಯಲ್ಲಿರುವ ಸರ್ಕಾರಿ ವಸ್ತು ಸಂಗ್ರಹಾಲಯದ ಅಭಿವೃದ್ಧಿ ಕೆಲಸ | 2,90,000/- | 7,250/- | ರೂ. 1000/- | -"- | -"- |
| | **ಕೇಂದ್ರ ಸರ್ಕಾರದ ಸಾಂಸ್ಕೃತಿಕ ಇಲಾಖೆಯ ಅನುದಾನ** | | | | | |
| 19 | ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ನಗರದ ಕಸ್ತೂರಬಾ ರಸ್ತೆಯಲ್ಲಿರುವ ಸರ್ಕಾರಿ ವಸ್ತು ಸಂಗ್ರಹಾಲಯದ ಅಭಿವೃದ್ಧಿ ಕೆಲಸ (ಶಿಲ್ಪಕಲಾ ಕೊಠಡಿ) | 6,48,660/- | 13,000/- | ರೂ. 1000/- | ಮೂರನೆಯ ದರ್ಜೆ ಹಾಗೂ ಮೇಲ್ಪಟ್ಟು | 3 ತಿಂಗಳು (ಮಳೆಗಾಲ ಬಿಟ್ಟು) |
| | **ಹಂಪಿ ಪ್ರಾಧಿಕಾರದ ಅನುದಾನ** | | | | | |
| 20 | ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಹಂಪಿಯ ತುಂಗಭದ್ರಾ ನದಿಯ ತೀರದಲ್ಲಿರುವ ಸ್ನಾನಘಟ್ಟ ಸಂರಕ್ಷಣಾ ಕೆಲಸ | 3,19,426/- | 8,000/- | ರೂ. 1000/- | ಮೂರನೇ ದರ್ಜೆ ಹಾಗೂ ಮೇಲ್ಪಟ್ಟು | 4 ತಿಂಗಳು (ಮಳೆಗಾಲ ಬಿಟ್ಟು) |

**ನಿಯಮಗಳು ಮತ್ತು ಸೂಚನೆಗಳು**

1. ಟೆಂಡರ್ ಹಾಕಲು ಇಚ್ಛಿಸುವ ಗುತ್ತಿಗೆದಾರರು ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯದಲ್ಲಿಯಾಗಲಿ ಹಾಗೂ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯಲ್ಲಿ ಈ ರೀತಿಯ ಕಾಮಗಾರಿಯನ್ನು ಅಂದರೆ ಸ್ಮಾರಕಗಳ ಸಂರಕ್ಷಣಾ ಕಾಮಗಾರಿಯನ್ನು ಯಶಸ್ವಿಯಾಗಿ ಮುಗಿಸಿದವರಾಗಿರಬೇಕು.
2. ಕೆಲಸದ ಅಂದಾಜು ಮೊತ್ತಕ್ಕಿಂತ ಶೇ. 50 ರಷ್ಟು ಮೊತ್ತಕ್ಕೆ ಕಡಿಮೆ ಇರದಂತೆ, ಇದೇ ರೀತಿಯ ಒಂದು ಕೆಲಸವನ್ನು ಸಮರ್ಪಕವಾಗಿ ಐದು ವರ್ಷದ ಬ್ಲಾಕ್ ಅವಧಿಯಲ್ಲಿ ನಿರ್ವಹಿಸಿದ ಬಗ್ಗೆ ಸಂಬಂಧಪಟ್ಟ ಅಧಿಕಾರಿಯು ನೀಡಿದ ದಾಖಲಾತಿ ಪ್ರಮಾಣ ಪತ್ರವನ್ನು ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸುವಾಗ ಸಲ್ಲಿಸಬೇಕು. ಹಾಗೂ ಚಾಲ್ತಿ ಸಾಲಿನಲ್ಲಿನ ಆದಾಯ ತೆರಿಗೆ ಸಲ್ಲಿಸಿದ ಬಗ್ಗೆ ದಾಖಲೆ ನೀಡುವುದು. ಅವಶ್ಯಕ ದಾಖಲೆಗಳು ಇಲ್ಲದ ಮನವಿಯನ್ನು ತಿರಸ್ಕರಿಸಲಾಗುವುದು.
3. ಮೇಲಿನ ಕಾಮಗಾರಿಗಳಿಗೆ ಅಗತ್ಯವಾದ ಎಲ್ಲಾ ಉಪಕರಣಗಳನ್ನು ಹೊಂದಿರಬೇಕು ಹಾಗೂ ನುರಿತ ಕೆಲಸದವರನ್ನು ಹೊಂದಿರಬೇಕು.
4. ಗುತ್ತಿಗೆದಾರರು ಮೇಲ್ಕಂಡ ಸಂರಕ್ಷಣಾ ಕೆಲಸಕ್ಕೆ ಅರ್ಜಿ ಸಲ್ಲಿಸುವಾಗ ನೋಂದಣಿ ಪುಸ್ತಕ ಪ್ರಮಾಣ ಪತ್ರದ ನಕಲನ್ನು ಅರ್ಜಿಯೊಂದಿಗೆ ಲಗತ್ತಿಸುವುದು ಕಡ್ಡಾಯವಾಗಿರುತ್ತದೆ.
5. ಟೆಂಡರ್‌ನಲ್ಲಿ ನಮೂದಿಸಿದ ದರಗಳು 1 ವರ್ಷದವರೆಗೆ ಮೌಲ್ಯ ಹೊಂದಿರಬೇಕು, ನಿಬಂಧನೆಯುಕ್ತ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಯಾವುದೇ ಕಾರಣ ನೀಡದೆ ಯಾವುದೇ ಟೆಂಡರ್‌ಗಳನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಹೊಸಪೇಟೆ ಇವರು ಕಾದಿರಿಸಿರುತ್ತಾರೆ.
7. ಮೇಲಿನ ಕಾಮಗಾರಿಗಳಲ್ಲಿ ಏನಾದರೂ ಸೇರ್ಪಡೆ ಅಥವಾ ಮಾರ್ಪಾಡಿಸುವ ಬಗೆಗೆ ಹಕ್ಕನ್ನು ಕಾಯ್ದಿರಿಸಲಾಗಿದೆ.
8. ಖಾಲಿ ಟೆಂಡರ್ ಫಾರಂ ಹಣ ಹಾಗೂ ಇ.ಎಂ.ಡಿ. ಹಣವನ್ನು ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಡಿ.ಡಿ. ಅಥವಾ ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಹೊಸಪೇಟೆ, ಇವರ ಹೆಸರಿನಲ್ಲಿ ಪಾವತಿ ಮಾಡುವುದು.
9. ಟೆಂಡರ್ ಲಕೋಟೆಯನ್ನು ಸಲ್ಲಿಸುವಾಗ ನಿಗದಿತ ಇ.ಎಂ.ಡಿ. ಹಣವನ್ನು ಡಿ.ಡಿ. ಅಥವಾ ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಸಲ್ಲಿಸದಿರುವಂತಹ ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸಲಾಗುವುದು.
10. ಮೇಲಿನ ನಿಯಮಗಳ ಪ್ರಕಾರ ಅರ್ಹರಿರುವ ಗುತ್ತಿಗೆದಾರರಿಗೆ ಮಾತ್ರ ಖಾಲಿ ಟೆಂಡರ್ ಫಾರಂ ಕೊಡಲಾಗುವುದು.
11. ಹೆಚ್ಚಿನ ವಿವರಗಳು ಬೇಕಾದಲ್ಲಿ ಕಛೇರಿಯಿಂದ ಪಡೆದುಕೊಳ್ಳುವುದು. ಟೆಂಡರ್ ಲಕೋಟೆಯ ಮೇಲೆ ಕಾಮಗಾರಿಯ ಹೆಸರನ್ನು ಕಡ್ಡಾಯವಾಗಿ ನಮೂದಿಸುವುದು.

**ನಿರ್ದೇಶಕರು,**

ಪಿ.ಆರ್. 575 ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ.

**ಆಯ್ಕೆ ಪ್ರಾಧಿಕಾರ ಹಾಗೂ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರು,**
**ಕರ್ನಾಟಕ ರಾಜ್ಯ, ನಂ. 17, "ಜಯನಿವಾಸ", ಶಂಕರಮಠ ರಸ್ತೆ, ಬೆಂಗಳೂರು-560 004.**

**ಅಧಿಸೂಚನೆ**

**ಸಂಖ್ಯೆ: ಸಿಬ್ಬಂದಿ-2:ನೇಮಕಾತಿ:18:2004-05, ದಿನಾಂಕ: 10ನೇ ಡಿಸೆಂಬರ್ 2004**

ಈ ಇಲಾಖೆಯ ಅಧಿಸೂಚನೆ ಸಂಖ್ಯೆ: ಸಿಬ್ಬಂದಿ-2:ನೇಮಕಾತಿ:11:2002-03, ದಿನಾಂಕ: 12.7.2002 ರನ್ವಯ ಶೀಘ್ರಲಿಪಿಗಾರರ ಬ್ಯಾಕ್‌ಲಾಗ್ ಹುದ್ದೆಗಳ ನೇಮಕಾತಿಗಾಗಿ ಸೂಕ್ತ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಸ್ವೀಕೃತಿಯಾದ ಅರ್ಜಿಗಳನ್ನು ಪರಿಶೀಲಿಸಿ 29 ರಿಂದ

40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಹಾಗೂ ಹೆಚ್ಚುವರಿ ಪಟ್ಟಿಯನ್ನು ಈ ಕಛೇರಿಯ ಸಮ ಸಂಖ್ಯೆಯ ದಿನಾಂಕ: 2.11.2004ರ ಅಧಿಸೂಚನೆಯಲ್ಲಿ ಪ್ರಕಟಿಸಲಾಗಿತ್ತು ಹಾಗೂ ಈ ವಿಚಾರದಲ್ಲಿ ಆಕ್ಷೇಪಣೆಗಳಿದ್ದಲ್ಲಿ ದಿನಾಂಕ: 15.11.2004 ರೊಳಗಾಗಿ ಸಲ್ಲಿಸಲು ಸೂಚಿಸಲಾಗಿತ್ತು.

ಆಕ್ಷೇಪಗಳನ್ನು ಸಲ್ಲಿಸಲು ನಿಗದಪಡಿಸಲಾದ ದಿನಾಂಕವಾದ 15.11.2004 ರೊಳಗೆ ಯಾವುದೇ ಆಕ್ಷೇಪಗಳು ಸ್ವೀಕೃತವಾಗಿರುವುದಿಲ್ಲ. ಇದರಿಂದ ತಾತ್ಕಾಲಿಕ ಆಯ್ಕೆ ಪಟ್ಟಿ ಹಾಗೂ ಹೆಚ್ಚುವರಿ ಪಟ್ಟಿಯಲ್ಲಿನ ಅಭ್ಯರ್ಥಿಗಿಂತ ಹೆಚ್ಚಿನ ಶೇಕಡ ಅಂಕಗಳನ್ನು ಗಳಿಸಿ ಅರ್ಹತೆ ಇರುವ ಯಾವುದೇ ಅಭ್ಯರ್ಥಿಗಳು ಇರುವುದಿಲ್ಲವೆಂದು ಪರಿಗಣಿಸಿ ಕರ್ನಾಟಕ ಸರ್ಕಾರಿ ಸೇವಾ (ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡಕ್ಕೆ ಮೀಸಲಾದ ಖಾಲಿ ಸ್ಥಾನಗಳ ವಿಶೇಷ ನೇಮಕಾತಿ) ನಿಯಮ 2001ರ ನಿಯಮ 6(1) ಹಾಗೂ 6(3)ರ ರೀತ್ಯ ಈ ಕೆಳಕಂಡ ಅರ್ಹ ಅಭ್ಯರ್ಥಿಗಳ ಆಯ್ಕೆ ಮುಖ್ಯ ಪಟ್ಟಿ ಹಾಗೂ ಹೆಚ್ಚುವರಿ ಪಟ್ಟಿಯನ್ನು ಪ್ರಕಟಿಸಲಾಗಿದೆ.

**ಮುಖ್ಯ ಪಟ್ಟಿ**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಹಾಗೂ ವಿಳಾಸ | ಒಳ ಮೀಸಲಾತಿ | ಹುಟ್ಟಿದ ದಿನಾಂಕ | ಅರ್ಹತಾ ವಿದ್ಯಾರ್ಹತೆ | ಅರ್ಹತಾ ಪರೀಕ್ಷೆಯಲ್ಲಿ ಪಡೆದ ಶೇಕಡ ಅಂಕಗಳು |
|---|---|---|---|---|---|
| 1 | 2 | 3 | 4 | 5 | 6 |
| 1 | ಕು: ಭಾರತಿ ಎಸ್. ನಂ. 1854:40, 19ನೇ ಕ್ರಾಸ್, 21ನೇ ಮುಖ್ಯ ರಸ್ತೆ, ಮಾರುತಿ ಮಂದಿರ ಹತ್ತಿರ, ವಿಜಯನಗರ, ಬೆಂಗಳೂರು-560 040 | ಪರಿಶಿಷ್ಟ ಜಾತಿ (ಇತರೆ) | 4.6.1973 | ಎಸ್.ಎಸ್.ಎಲ್.ಸಿ ಡಿಪ್ಲಮೋ | 65.94 |
| **ಹೆಚ್ಚುವರಿ ಪಟ್ಟಿ** | | | | | |
| 1 | ಕು: ಮಹಾದೇವಿ ಶಂಕರ ಕಾಂಬಳೆ, ಯು:ಪೂ:ಆಳೂರ, ತಾಲ್ಲೂಕು: ಇಂಡಿ, ಜಿಲ್ಲೆ: ವಿಜಾಪುರ | ಪರಿಶಿಷ್ಟ ಜಾತಿ (ಇತರೆ) | 6.5.1970 | ಎಸ್.ಎಸ್.ಎಲ್.ಸಿ ಮತ್ತು ಕನ್ನಡ ಶೀಘ್ರಲಿಪಿ ಪ್ರೌಢ ದರ್ಜೆ ಹಾಗೂ ಕನ್ನಡ ಬೆರಳಚ್ಚು ಪ್ರೌಢದರ್ಜೆ | 65.00 |

ಪಿ.ಆರ್. 576

**ಟಿ.ಎ. ಪಾರ್ಥಸಾರಥಿ**
ನಿರ್ದೇಶಕರು.

## ಕರ್ನಾಟಕ ಲೋಕಸೇವಾ ಆಯೋಗದ ಕಛೇರಿ, "ಪಾರ್ಕ್ ಹೌಸ್", ಬೆಂಗಳೂರು

### ತಿದ್ದುಪಡಿ

### ಸಂಖ್ಯೆ: ಇಪ(2) 6377/2004-05, ಪಿಎಸ್‌ಸಿ, ದಿನಾಂಕ: 16ನೇ ಡಿಸೆಂಬರ್ 2004

2004ರ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಸಂಬಂಧಿಸಿದ ಅಂಕಗಳ ಮರು ಎಣಿಕೆಗಾಗಿ ಕೆಲವೊಂದು ಅಭ್ಯರ್ಥಿಗಳಿಂದ ಬಂದಿದ್ದ ಕೋರಿಕೆಯಂತೆ ಮರು ಎಣಿಕೆಯನಂತರ ಅಂಕಗಳಲ್ಲಿ ಕಂಡುಬಂದ ಬದಲಾವಣೆಗಳಿಗನುಸಾರವಾಗಿ ದಿನಾಂಕ; 7.10.2004ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿರುವ ಸದರಿ ಅಧಿವೇಶನದ ಫಲಿತಾಂಶವನ್ನು ಅದರಲ್ಲಿ ಪರಿಶಿಷ್ಟ-"ಎ" ರಡಿ ಕೆಳಕಂಡವುಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

**ಪರಿಶಿಷ್ಟ-ಎ**

| ನೋಂದಣಿ ಸಂಖ್ಯೆ | ವಿಷಯ | ಕೇಂದ್ರ | ತೇರ್ಗಡೆ ದರ್ಜೆ |
|---|---|---|---|
| 48004 | ಅಕೌಂಟ್ಸ್ ಹೈಯರ್ | ಬೆಂಗಳೂರು | ಸಾಮಾನ್ಯ |
| 46438 | ಅಕೌಂಟ್ಸ್ ಹೈಯರ್ | ಬೆಂಗಳೂರು | ಸಾಮಾನ್ಯ |
| 68353 | ಅಕೌಂಟ್ಸ್ ಹೈಯರ್ | ಕೋಲಾರ | ಸಾಮಾನ್ಯ |
| 73947 | ಅಕೌಂಟ್ಸ್ ಹೈಯರ್ | ಮೈಸೂರು | ಸಾಮಾನ್ಯ |

ಪಿ.ಆರ್. 577

ಕಾರ್ಯದರ್ಶಿ ಹಾಗೂ ನಿಯಂತ್ರಕರು ಇಲಾಖಾ ಪರೀಕ್ಷೆಗಳು
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು-560 001.

## ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು-560 001

### ಟೆಂಡರ್ ಪ್ರಕಟಣೆ

### ಸಂಖ್ಯೆ: ಸಂಗ್ರಹ-2(2)28/2004-05, ದಿನಾಂಕ: 16ನೇ ಡಿಸೆಂಬರ್ 2004

ಪೊಲೀಸ್ ಇಲಾಖೆಗೆ ಅಗತ್ಯವಿರುವ ಈ ಕೆಳಕಂಡ ಉಪಕರಣಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು (ಟೆಂಡರ್) "ದ್ವಿ ಲಕೋಟೆ ಪದ್ಧತಿ" ಯಲ್ಲಿ ಆಹ್ವಾನಿಸಲಾಗಿದೆ.

### "60 ಅಡಿ ಏರಿಯಲ್ ಟವರ್"

**ಸೂಚನೆ:** ಮೇಲಿನ ಉಪಕರಣದ ಉತ್ಪಾದಕರು / ಉತ್ಪಾದಕ ಘಟಕ / ಉತ್ಪಾದಕ ಘಟಕದ ಅಧಿಕೃತ ಏಜೆಂಟುದಾರರು, ಪ್ರಖ್ಯಾತ ಕಂಪನಿಯ ಬ್ರಾಂಡ್‌ಗಳಿಗೆ ಆದ್ಯತೆ ನೀಡಲಾಗುವುದು.

2. ವಿವರ ಹಾಗೂ ಷರತ್ತನ್ನು ಒಳಗೊಂಡ ಟೆಂಡರ್ ಅರ್ಜಿಯನ್ನು ನಿರ್ದಿಷ್ಟತೆಯೊಂದಿಗೆ (Specifications) ದಿನಾಂಕ 23.12.2004 ರಿಂದ 12.1.2005 ರವರೆಗೆ ಕಛೇರಿಯ ಕೆಲಸದ ದಿನದಂದು ಬೆಳಿಗ್ಗೆ 10 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು ಪ್ರತಿ ಟೆಂಡರ್ ಅರ್ಜಿಯ ಬೆಲೆ ರೂ. 200.00 ಆಗಿದ್ದು, ಇದನ್ನು ಮರು ಪಾವತಿ ಮಾಡಲಾಗುವುದಿಲ್ಲ. ಟೆಂಡರ್ ಅರ್ಜಿಯನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿಯಾರ್ಡರ್ ಮೂಲಕ ಪಾವತಿಸಿದರೆ ಅಂಗೀಕರಿಸುವುದಿಲ್ಲ) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯಬಯಸುವವರು ರೂ. 200/- ಗಳಿಗೆ ಡಿ.ಡಿ. ಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಹಾಗೂ ಸ್ವವಿಳಾಸದೊಂದಿಗೆ ಲಕೋಟೆಯ ಮೇಲೆ ರೂ. 50/- ಗಳ ಅಂಚೆ ಚೀಟಿಯನ್ನು ಅಂಟಿಸಿ ಕಳುಹಿಸಲು ಕೋರಿದೆ.

3. ಟೆಂಡರ್ ಅರ್ಜಿಯನ್ನು ಮೊಹರು ಮಾಡಿದ ಎರಡು ಪ್ರತ್ಯೇಕ ಕವರುಗಳಲ್ಲಿ ಈ ಕೆಳಕಂಡಂತೆ ಕಳುಹಿಸಬೇಕಾಗಿರುತ್ತದೆ.

ಅ) ಮೊಹರು ಮಾಡಿದ ಒಂದನೇ ಕವರಿನ ಮೇಲ್ಭಾಗದಲ್ಲಿ "ಉಪಕರಣಗಳ" ಸರಬರಾಜಿಗಾಗಿ ಇ.ಎಂ.ಡಿ. ಮತ್ತು ಇತರೆ ವಿವರಣೆ ಎಂದು ಹಾಗೂ ಕವರಿನ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.

ಆ) ಮೊಹರು ಮಾಡಿದ ಎರಡನೇ ಕವರಿನ ಮೇಲ್ಭಾಗದಲ್ಲಿ "ಉಪಕರಣಗಳ ಬೆಲೆ ಪಟ್ಟಿ" ಎಂದು ಮತ್ತು ಕವರಿನ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.

4. **ಮೊದಲನೇ ಕವರ್:** ಮೊಹರು ಮಾಡಿದ ಮೊದಲನೆ ಕವರ್ ಈ ಕೆಳಕಂಡ ಮಾಹಿತಿಯನ್ನು ಒಳಗೊಂಡಿರಬೇಕು.

ಅ) ಸರಬರಾಜು ಮಾಡಲು ಇಚ್ಛಿಸುವ ಪ್ರತಿಯೊಂದು ಸಾಮಗ್ರಿಗಳಿಗೆ ಇ.ಎಂ.ಡಿ.ಯ ಬಾಬ್ತು ಪ್ರತ್ಯೇಕವಾಗಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದ ಡಿಮ್ಯಾಂಡ್ ಡ್ರಾಫ್ಟ್‌ಗಳು (ಇ.ಎಂ.ಡಿ. ಯಲ್ಲಿ ನಮೂದಿಸಲಾದ ಸಾಮಗ್ರಿಯ ಒಟ್ಟು ಬೆಲೆಗೆ ಶೇಕಡ 2 ರಷ್ಟು ಇರಬೇಕು) ಸರಬರಾಜು ಮಾಡುವ ಪ್ರತಿಯೊಂದು ಸಾಮಗ್ರಿಗಳಿಗೆ ಪ್ರತ್ಯೇಕ ಇ.ಎಂ.ಡಿ. ಗಳನ್ನು ಸಲ್ಲಿಸಬೇಕು. ಇಲ್ಲದಿದ್ದಲ್ಲಿ ಪರಿಗಣಿಸಲಾಗುವುದಿಲ್ಲ.

ಆ) ಸರಬರಾಜು ಮಾಡುವ ಸಂಸ್ಥೆಯ ಸಾಮರ್ಥ್ಯದ ಬಗ್ಗೆ ಮಾಹಿತಿ ಮತ್ತು ಸರಬರಾಜು ಮಾಡುವ ಸಾಮಗ್ರಿಗಳನ್ನು ಉತ್ಪಾದಿಸಲಾಗುತ್ತಿದೆಯೇ ಅಥವಾ ಇಲ್ಲವೆ ಎಂಬ ಬಗ್ಗೆ ದಾಖಲಾತಿ.

ಇ) ಆರ್ಥಿಕ ಸ್ಥಿತಿ ಮತ್ತು ಸಾಮರ್ಥ್ಯದ ಬಗ್ಗೆ.

ಈ) ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆ ಬಗ್ಗೆ.

ಉ) ವಾರ್ಷಿಕ ವಹಿವಾಟು

ಊ) ಟೆಂಡರ್ ಅರ್ಜಿದಾರರು ಸರಬರಾಜು ಮಾಡಲು ಬಯಸುವ ಸಾಮಗ್ರಿಗಳ ಪಟ್ಟಿ, ಪಟ್ಟಿಯಲ್ಲಿ ಬೆಲೆಯನ್ನು ನಮೂದಿಸಬಾರದು.

ಋ) ಅನುಭವ ಮತ್ತು ಹಿಂದೆ ಸರಬರಾಜು ಮಾಡಿರುವ ಬಗ್ಗೆ.

5. **ಎರಡನೇ ಕವರ್:** ಮೊಹರು ಮಾಡಿದ ಎರಡನೇ ಕವರ್ ಟೆಂಡರ್ ಅರ್ಜಿ ಮತ್ತು ಸರಬರಾಜು ಮಾಡುವ ಸಾಮಗ್ರಿಯ ಹೆಸರು ಮತ್ತು ಬೆಲೆ ಪಟ್ಟಿಯನ್ನು ಮಾತ್ರ ಹೊಂದಿರಬೇಕು.

6. ಮೊಹರು ಮಾಡಿದ ಎರಡು ಕವರ್‌ಗಳನ್ನು ಮೇಲೆ ತಿಳಿಸಿದ ರೀತಿಯಲ್ಲಿ ಶ್ರೀ ಟಿ.ಜಿ. ದೊರೆಸ್ವಾಮಿ ನಾಯಕ್, ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ಕೇಂದ್ರಸ್ಥಾನ-1), ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಕಛೇರಿ, ನೃಪತುಂಗ ರಸ್ತೆ, ಬೆಂಗಳೂರು-560 001 ರವರ ಹೆಸರಿಗೆ ದಿನಾಂಕ: 22.1.2005 ರ ಸಂಜೆ 5.00 ಗಂಟೆ ಒಳಗೆ ತಲುಪುವಂತೆ ಸಲ್ಲಿಸತಕ್ಕದ್ದು, ತದನಂತರ ಸಲ್ಲಿಸಲಾದ / ಪಡೆದ ಅರ್ಜಿಗಳನ್ನು ಪರಿಗಣಿಸುವುದಿಲ್ಲ.

7. ಟೆಂಡರ್ ಆಹ್ವಾನಿಸಿದ ಅಧಿಕಾರಿಯು ದಿನಾಂಕ: 24.1.2005 ರಂದು ಮೊದಲನೆ ಕವರನ್ನು ಬೆಳಿಗ್ಗೆ 11 ಗಂಟೆಗೆ ತೆರೆದು, ಸರಬರಾಜು ಸಂಸ್ಥೆಗಳು ಸಲ್ಲಿಸಲಾದ ಮಾಹಿತಿಗಳನ್ನು / ದಾಖಲಾತಿಗಳನ್ನು ಪರಿಶೀಲಿಸಿ, ಸರಬರಾಜು ಮಾಡುವ ಅರ್ಹ ಸಂಸ್ಥೆಗಳ ಪಟ್ಟಿಯನ್ನು ತಯಾರಿಸಲಾಗುವುದು, ಇಚ್ಛೆಯುಳ್ಳ ಟೆಂಡರ್‌ದಾರರು / ಪ್ರತಿನಿಧಿಗಳು, ಟೆಂಡರ್ ತೆರೆಯುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶವಿರುತ್ತದೆ.

8. ಪ್ರತಿ ಸಾಮಗ್ರಿಗಳಿಗೆ ಪ್ರತ್ಯೇಕವಾದ ಇ.ಎಂ.ಡಿ.ಯನ್ನು ಡಿ.ಡಿ. ಮೂಲಕ ಪಾವತಿಸದಿದ್ದರೆ, ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಟೆಂಡರ್‌ದಾರರು ಅಂಚೆ ಮೂಲಕ / ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿಗಳು ಮತ್ತು ದಾಖಲಾತಿಗಳು ವಿಳಂಬವಾಗಿ ತಲುಪಿದಲ್ಲಿ / ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೇ ಸಾರಸಗಟಾಗಿ / ಭಾಗಶಃ ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ಪಿ.ಆರ್. 578

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್
ರವರ ಪರವಾಗಿ.

## ಕರ್ನಾಟಕ ಅರಣ್ಯ ಇಲಾಖೆ

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಕಛೇರಿ

## ಸಂಕ್ಷಿಪ್ತ ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ: ಎ3-ಸಿಬ್ಬಂದಿ:ಅಮೊ:ವಾಹನ:ಸಿಆರ್ 53/2003-04, ದಿನಾಂಕ: 14ನೇ ಡಿಸೆಂಬರ್ 2004**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ವನ್ಯಜೀವಿ ವಿಭಾಗ, ಶಿವಮೊಗ್ಗದ ವ್ಯಾಪ್ತಿಯಲ್ಲಿ ಬರುವ ವಿವಿಧ ವಲಯಗಳ ಅರಣ್ಯ ಮೊಕದ್ದಮೆಗಳಲ್ಲಿ ಅಮಾನತ್ತುಪಡಿಸಿ, ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಂಡ ಈ ಕೆಳಕಂಡ ವಾಹನಗಳನ್ನು ಎಲ್ಲಿವೆಯೋ, ಹೇಗಿದೆಯೋ ಹಾಗೆಯೇ ಸಂಬಂಧಿಸಿದ ವಲಯಗಳ ಕಛೇರಿ ಆವರಣದಲ್ಲಿ ದಿನಾಂಕ: 21.1.2005 ರಂದು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ರವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟವರಿಂದಾಗಲೀ, ನಿಗದಿತ ಷರತ್ತುಗಳಿಗೆ ಒಳಪಟ್ಟಂತೆ ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು. ಇಷ್ಟವುಳ್ಳವರು ನಿಗದಿಪಡಿಸಿದ ಠೇವಣಿ ಹಣವನ್ನು ಮುಂಗಡವಾಗಿ ಕಟ್ಟಿ, ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ ಷರತ್ತಿಗೆ ಅನುಗುಣವಾಗಿ ಟೆಂಡರ್ ಕಂ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದಾಗಿದೆ.

**ಅನುಸೂಚಿ**

| ಕ್ರ.ಸಂ. | ವಾಹನಗಳ ವಿವರ ಮತ್ತು ನೋಂದಣಿ ಸಂಖ್ಯೆ | ಸ್ಥಳ | ಟೆಂಡರ್ ಮತ್ತು ಹರಾಜಿನ ದಿನಾಂಕ ಮತ್ತು ಸಮಯ |
|---|---|---|---|
| 1 | ಮಿನಿ ವ್ಯಾನ್ ಕೆಎ-18-7682 | ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣ, ಗಾಜನೂರು | ದಿನಾಂಕ: 21.1.2005 ರಂದು ಬೆಳಿಗ್ಗೆ 10.00 ರಿಂದ 11.00 ವರೆಗೆ |
| 2 | ಮಾರುತಿ ಕಾರು ಕೆಎ-03-ಎಂ-7237 | ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣ, ಅನುಪಿನಕಟ್ಟೆ | ದಿನಾಂಕ: 21.1.2005 ರಂದು ಬೆಳಿಗ್ಗೆ 12.30 ರಿಂದ 1.30 ವರೆಗೆ |
| 3 | ಬಜಾಜ್ ಕಬ್ ಸ್ಕೂಟರ್ ಕೆಎ-14-ಇ-23 | | |
| 4 | ವ್ಯಾನ್ ಸಿಎಜಿ-7648 | | |

| ಕ್ರ.ಸಂ. | ವಾಹನಗಳ ವಿವರ ಮತ್ತು ನೋಂದಣಿ ಸಂಖ್ಯೆ | ಸ್ಥಳ | ಟೆಂಡರ್ ಮತ್ತು ಹರಾಜಿನ ದಿನಾಂಕ ಮತ್ತು ಸಮಯ |
|---|---|---|---|
| 5 | ಬಜಾಜ್ ಸ್ಕೂಟರ್ ಎಂಇಎಸ್-8657 | ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣ, ಸಿರಿಗೆರೆ | ದಿನಾಂಕ: 21.1.2005 ರಂದು ಮಧ್ಯಾಹ್ನ 3.30 ರಿಂದ 4.30 ವರೆಗೆ |
| 6 | ಅಂಬಾಸಿಡರ್ ಕಾರು ಸಿಎಪಿ-8197 | | |

## ಟೆಂಡರ್ ಕಂ ಹರಾಜಿನ ಷರತ್ತುಗಳು

1. ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸುವ ವ್ಯಕ್ತಿಗಳು ಟೆಂಡರ್ ಹಾಗೂ ಹರಾಜಿನ ಮುಂಚಿತವಾಗಿ ವಾಹನಗಳು ಎಲ್ಲಿವೆಯೋ, ಅಲ್ಲಿಯೇ ಪರೀಕ್ಷಿಸಿ, ನಂತರ ಭಾಗವಹಿಸುವುದು. ಹರಾಜು ಮುಗಿದ ನಂತರ ವಾಹನದ ಸ್ಥಿತಿಗಳ ಬಗ್ಗೆ ಎತ್ತುವ ಯಾವುದೇ ಆಕ್ಷೇಪಣೆಗಳಿಗೆ ಮಾನ್ಯತೆ ನೀಡುವುದಿಲ್ಲ.
2. ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸುವ ವ್ಯಕ್ತಿಗಳು ಟೆಂಡರ್ ಸಲ್ಲಿಸುವ ಮೊದಲು ಇ.ಎಂ.ಡಿ. ಮೊತ್ತವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಹೆಸರಿಗೆ ಡಿ.ಡಿ. ಮೂಲಕ ಅಥವಾ ನಗದು ಮೂಲಕ ಸಂಬಂಧಿಸಿದ ವಲಯ ಅರಣ್ಯಾಧಿಕಾರಿಯವರ ಕಛೇರಿಯಲ್ಲಿ ಪಾವತಿಸತಕ್ಕದ್ದು. ನಿಗದಿಪಡಿಸಿರುವ ಇ.ಎಂ.ಡಿ. ಮೊತ್ತ ಈ ಕೆಳಕಂಡಂತಿದೆ.
   ಅ) ಜೀಪು ಮತ್ತು ಕಾರಿಗೆ ರೂ. 5000.00 (ರೂ. ಐದು ಸಾವಿರ ಮಾತ್ರ)
   ಆ) ದ್ವಿಚಕ್ರ ವಾಹನಕ್ಕೆ ರೂ. 3000.00 (ರೂ. ಮೂರು ಸಾವಿರ ಮಾತ್ರ)
   ಇ) ಲಾರಿ, ವ್ಯಾನ್‌ಗಳಿಗೆ ರೂ. 10000.00 (ರೂ ಹತ್ತು ಸಾವಿರ ಮಾತ್ರ)
3. ಹರಾಜಿನಲ್ಲಿ ಅಥವಾ ಟೆಂಡರ್‌ನಲ್ಲಿ ಜಯಶೀಲರಾದ ವ್ಯಕ್ತಿಗಳು ವಾಹನ ಖರೀದಿಯ ಮೊತ್ತದ ಶೇಕಡಾ 50 ರಷ್ಟು ಹಣ ಮತ್ತು ಚಾಲ್ತಿ ದರದ ಪೂರ್ಣ ತೆರಿಗೆಯನ್ನು ಹರಾಜು ಮುಗಿದ ಕೂಡಲೇ ಸಂಬಂಧಿಸಿದ ವನ್ಯಜೀವಿ ವಲಯ ಅರಣ್ಯಾಧಿಕಾರಿಯವರ ಕಛೇರಿಯಲ್ಲಿ ಪಾವತಿಸತಕ್ಕದ್ದು. ಬಾಕಿ ಉಳಿದ ಮೊತ್ತವನ್ನು ಟೆಂಡರ್-ಕಂ-ಹರಾಜಿನ ಅನುಮೋದನೆಯ ಮಂಜೂರಾತಿ ಆದೇಶ ದೊರೆತ 10 (ಹತ್ತು) ದಿನಗಳ ಒಳಗಾಗಿ ಪಾವತಿಸತಕ್ಕದ್ದು.
4. ಪ್ರಕಟಿಸಿದ ವಾಹನಗಳಲ್ಲಿ ಯಾವ ವಾಹನವನ್ನಾದರೂ ಯಾವುದೇ ಕಾರಣ ನೀಡದೇ ಹರಾಜಿನಿಂದ ಕೈಬಿಟ್ಟು ಕಾಯ್ದಿರಿಸುವ ಪೂರ್ಣ ಅಧಿಕಾರ ಈ ಕೆಳ ಸಹಿದಾರರಿಗೆ ಇರುತ್ತದೆ.
5. ಪ್ರಕಟಿಸಿದ ವಾಹನಗಳಲ್ಲಿ ಯಾವುದಾದರೂ ವಾಹನಗಳನ್ನು ಇಲಾಖಾ ಉಪಯೋಗಕ್ಕೆ ಮೇಲಾಧಿಕಾರಿಯವರು ಆದೇಶ ನೀಡಿದಲ್ಲಿ ಅಂತಹ ವಾಹನಗಳನ್ನು ಟೆಂಡರ್-ಕಂ-ಹರಾಜಿನಿಂದ ಕೈಬಿಡಲಾಗುವುದು.
6. ಟೆಂಡರ್ ನಮೂನೆಗಳನ್ನು ನಿಗದಿತ ಬೆಲೆ ಪಾವತಿಸಿ, ಸಂಬಂಧಿಸಿದ ವನ್ಯಜೀವಿ ವಲಯ ಅರಣ್ಯಾಧಿಕಾರಿಗಳವರ ಕಛೇರಿಯಿಂದ ಕಛೇರಿಯ ವೇಳೆಯಲ್ಲಿ ಪಡೆಯಬಹುದಾಗಿದೆ.
7. ಹರಾಜು ಮುಗಿದ ನಂತರ ಹರಾಜುದಾರರ / ಟೆಂಡರ್‌ದಾರರ ಸಮ್ಮುಖದಲ್ಲಿ ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು ತೆರೆಯಲಾಗುವುದು.
8. ಕಪ್ಪು ಪಟ್ಟಿ (Black list) ನಲ್ಲಿರುವವರು, ಅರಣ್ಯ ತಕ್ಷೀರ್‌ನಲ್ಲಿ ದಾಖಲಾದವರು, ದಿವಾಳಿಯಾದವರು, ಶ್ರೀಗಂಧ ತಕ್ಷೀರಿನಲ್ಲಿ ಶಿಕ್ಷೆಗೆ ಒಳಗಾದವರುಗಳಿಗೆ ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ.
9. ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಭಾಗವಹಿಸಲಿಚ್ಛಿಸುವರು ಖರೀದಿ ಬಯಸುವ ಪ್ರತಿಯೊಂದು ವಾಹನಕ್ಕೂ ಪ್ರತ್ಯೇಕವಾಗಿ ಟೆಂಡರ್‌ನ್ನು ಸಲ್ಲಿಸಬೇಕು. ಅದಕ್ಕೆ ನಿಗದಿಪಡಿಸಿದ ಠೇವಣಿ ಮೊತ್ತವನ್ನು ಸಲ್ಲಿಸಿ, ಸ್ವೀಕೃತಿಯ ಸಂಖ್ಯೆಯನ್ನು ಟೆಂಡರ್ ನಮೂನೆಯಲ್ಲಿ ನಮೂದಿಸಿ, ಮೊಹರು ಮಾಡಿದ ಲಕೋಟೆಯಲ್ಲಿ ಟೆಂಡರ್-ಕಂ-ಹರಾಜಿನ ನಿಗದಿಪಡಿಸಿದ ದಿನಾಂಕ ಹಾಗೂ ಸಮಯದೊಳಗೆ ವಲಯ ಅರಣ್ಯಾಧಿಕಾರಿಗಳು, ಸಂಬಂಧಿಸಿದ ವಲಯ ಅರಣ್ಯಾಧಿಕಾರಿಗಳ ಕಛೇರಿಯಲ್ಲಿರುವ ಸ್ವೀಕೃತ ಪೆಟ್ಟಿಗೆಯಲ್ಲಿ ಹಾಕತಕ್ಕದ್ದು.
10. ಟೆಂಡರ್ ಹಾಕದೇ ನೇರವಾಗಿ ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಪ್ರತಿ ಲಾರಿ, ವ್ಯಾನ್‌ಗಳಿಗೆ ರೂ. 10000.00, ಕಾರು, ಜೀಪು ವಾಹನಕ್ಕೆ 5000.00 ರೂ. ಹಾಗೂ ದ್ವಿಚಕ್ರ ವಾಹನಕ್ಕೆ 3000.00 ರೂ.ಗಳಂತೆ ಹರಾಜು ನಡೆಸುವ ಕಛೇರಿಯಲ್ಲಿ ಒಪ್ಪಿಸಿ, ಸ್ವೀಕೃತಿ ಪಡೆಯುವುದು.
11. ಜಂಟಿಯಾಗಿ ಕಟ್ಟಲು ಬಯಸುವ ಮುಂಗಡ ಠೇವಣಿಯನ್ನು ಅಂಗೀಕರಿಸುವುದಿಲ್ಲ. ಪ್ರತಿನಿಧಿಯಾಗಿ ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗಿಂತ ಮೊದಲು ವಿಶೇಷ ಅರ್ಹತಾ ಪತ್ರವನ್ನು ಹರಾಜು ನಡೆಸುವ ಅಧಿಕಾರಿಗೆ ಒಪ್ಪಿಸಿ, ಅವರಿಂದ ಅನುಮತಿಯನ್ನು ಪಡೆದು, ನಂತರ ಹರಾಜಿನಲ್ಲಿ ಭಾಗವಹಿಸುವುದು.
12. ಸರ್ಕಾರದ ಪರವಾಗಿ ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸುವವರು ಮುಂಗಡ ಠೇವಣಿ ಹಣವನ್ನು ಕಟ್ಟಿ, ತಮ್ಮ ಕಛೇರಿಯ ಮುಖ್ಯಸ್ಥರಿಂದ ಪಡೆದ ಅರ್ಹತಾ ಪತ್ರದ ಪ್ರತಿಯನ್ನು ಹರಾಜು ಮಾಡುವ ಅಧಿಕಾರಿಯವರಿಗೆ ಹರಾಜಿಗಿಂತ ಮುಂಚೆ ಒಪ್ಪಿಸಿ, ಅವರ ಅನುಮತಿಯನ್ನು ಪಡೆದು, ನಂತರ ಹರಾಜಿನಲ್ಲಿ ಭಾಗವಹಿಸಬಹುದು.
13. ಸಂಘ-ಸಂಸ್ಥೆಗಳ ಪ್ರತಿನಿಧಿಯಾಗಿ ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸುವವರು ಸಂಬಂಧಪಟ್ಟವರಿಂದ ಪಡೆದ ವಿಶೇಷ ಅರ್ಹತಾ ಪತ್ರವನ್ನು ಹರಾಜು ಮಾಡುವ ಅಧಿಕಾರಿಯವರಿಗೆ ಹರಾಜಿಗಿಂತ ಮುಂಚೆ ಒಪ್ಪಿಸಿ, ಅವರ ಅನುಮತಿಯನ್ನು ಪಡೆದು ನಂತರ ಹರಾಜಿನಲ್ಲಿ ಭಾಗವಹಿಸಬಹುದು.
14. ಟೆಂಡರ್-ಕಂ-ಹರಾಜು ಪ್ರಕಟಣೆಯ ಪತ್ರಕ್ಕೆ ಸಹಿ ಮಾಡದಿದ್ದವರ ಅಹವಾಲನ್ನು ಅಂಗೀಕರಿಸುವುದಿಲ್ಲ.
15. ಟೆಂಡರ್-ಕಂ-ಹರಾಜನ್ನು ಯಾವುದೇ ಕಾರಣ ನೀಡದೇ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಹರಾಜು ನಡೆಸುವ ಅಧಿಕಾರಿಗೆ ಇರುತ್ತದೆ.
16. ಬಿಡ್‌ದಾರರು ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸಿ, ವಾಹನವನ್ನು ಕೊಂಡು ಬಾಕಿ ಹಣವನ್ನು ಕಟ್ಟದೇ ಇದ್ದಲ್ಲಿ ಅಂತಹ ಪ್ರಕರಣಗಳಲ್ಲಿ ಮರು ಹರಾಜಿನಿಂದ ಸರ್ಕಾರಕ್ಕೆ ನಷ್ಟ ಉಂಟಾಗಿದ್ದಲ್ಲಿ ಅಂತಹ ನಷ್ಟವನ್ನು ಸೆಕ್ಷನ್ 109, ಕರ್ನಾಟಕ ಅರಣ್ಯ ಕಾಯಿದೆ ಪ್ರಕಾರ ಭೂ ಕಂದಾಯ ಬಾಕಿಯಂತೆ ವಸೂಲು ಮಾಡಲಾಗುವುದು.
17. ಟೆಂಡರ್-ಕಂ-ಹರಾಜಿನಲ್ಲಿ ವಾಹನಗಳನ್ನು ಕೊಂಡವರು ವಾಹನಗಳ ಮಾಲೀಕತ್ವದ ವರ್ಗಾವಣೆಯ ಖರ್ಚು ವೆಚ್ಚಗಳನ್ನು ಅವರೇ ಭರಿಸತಕ್ಕದ್ದು.

18. ಟೆಂಡರ್-ಕಂ-ಹರಾಜು ಮಂಜೂರಾತಿಯ ಆದೇಶದ ದಿನಾಂಕದಿಂದ 15 ದಿನಗಳೊಳಗಾಗಿ ಬಿಡ್‌ದಾರರು ವಾಹನಗಳನ್ನು ತಮ್ಮ ವಶಕ್ಕೆ ಪಡೆದುಕೊಳ್ಳತಕ್ಕದ್ದು. 15 ದಿನಗಳ ನಂತರ ಮುಂದಿನ 75 ದಿನಗಳವರೆಗೆ ದಿನ ಒಂದಕ್ಕೆ 25.00 ರೂಪಾಯಿಗಳಂತೆ ನೆಲ ಬಾಡಿಗೆಯನ್ನು ಮತ್ತು ದಂಡ 500.00 ರೂಪಾಯಿಗಳನ್ನು ವಾಹನ ಒಂದಕ್ಕೆ ವಸೂಲು ಮಾಡಲಾಗುವುದು. 90 ದಿವಸಗಳಲ್ಲಿ ಖರೀದಿಸಿದ ವಾಹನವನ್ನು ಬಿಡುಗಡೆ ಪಡೆಯಲು ವಿಫಲರಾದಲ್ಲಿ ಅಂತಹ ವಾಹನಗಳನ್ನು ಮರು ಹರಾಜು ಮಾಡಲಾಗುವುದು.
19. ಬಿಡ್‌ದಾರರು ವಾಹನಗಳಿಗೆ ಅತೀ ಹೆಚ್ಚು ಹಣಕ್ಕೆ ಕೂಗಿ ಅವರ ಹೆಸರನ್ನು ಘೋಷಿಸಿದ ನಂತರ ಹರಾಜು ಚೀಟಿಗಳನ್ನು ಪರಿಶೀಲಿಸಿ, ಅದರಲ್ಲಿರುವ ಮೊಬಲಗು ಸರಿಯಾಗಿ ನಮೂದಿಸಲಾಗಿದೆ ಎಂಬುದಕ್ಕೆ ಖಚಿತ ಮಾಡಿಕೊಂಡು ತಮ್ಮ ಸಹಿ ಹಾಕುವುದು.
20. ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಘೋಷಿಸಿದ ಎರಡಾವರ್ತಿಯ ಸವಾಲನ್ನು ಇಲಾಖಾ ಮೇಲಾಧಿಕಾರಿಯವರು ಹರಾಜು ಮಂಜೂರಾತಿ ನೀಡಬೇಕಾಗಿರುತ್ತದೆ. ಅವರಿಂದ ಮಂಜೂರಾತಿ ಆದೇಶ ಬಂದ ತರುವಾಯ ಬಿಡ್‌ದಾರರಿಗೆ ತಿಳಿಸಲಾಗುವುದು. ಈ ಅವಧಿಯಲ್ಲಿ ಬಿಡ್‌ದಾರರು ತಮ್ಮ ಬಿಡ್ಡನ್ನು ಹಿಂತೆಗೆದುಕೊಳ್ಳಲು ಅವಕಾಶವಿರುವುದಿಲ್ಲ. ಎರಡಾವರ್ತಿಯ ಸವಾಲುಗಳ ಅಂಗೀಕಾರ ಅಥವಾ ಅನಂಗೀಕಾರ ಕುರಿತು ಬಿಡ್‌ದಾರರಿಗೆ ಪತ್ರ ಮುಖೇನ ತಿಳಿಸಲಾಗುವುದು.
21. ಬಿಡ್‌ದಾರರು ಕಟ್ಟಿದ ಠೇವಣಿ ಹಣದ ಮಿತಿಯೊಳಗಾಗಿ ವಾಹನವನ್ನು ಕೊಂಡಲ್ಲಿ ಪೂರ್ಣ ಹಣವನ್ನು ಲೆಕ್ಕಕ್ಕೆ ತೆಗೆದುಕೊಂಡು ಬಾಕಿ ಹಣವನ್ನು ಮಾತ್ರ ಹಿಂದಿರುಗಿಸಲಾಗುವುದು.
22. ಬಿಡ್‌ದಾರರು ವಾಹನವನ್ನು ನಿಗದಿಪಡಿಸಿದ ಅವಧಿಯಲ್ಲಿ ತೆಗೆದುಕೊಂಡು ಹೋಗದಿದ್ದ ಪಕ್ಷದಲ್ಲಿ ವಾಹನ ಹಾಳಾದರೆ, ಕಳವು ಆದರೆ ಮತ್ತಿತರೆ ಲೋಪಕ್ಕೆ ಇಲಾಖೆಯವರು ಜವಾಬ್ದಾರಿಯಾಗಿರುವುದಿಲ್ಲ.
23. ಬಿಡ್‌ದಾರರು ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಹೆಚ್ಚಿನ ಮೊತ್ತಕ್ಕೆ ಕೂಗಿ, ನಮೂದಿಸಿದ ತರುವಾಯ ತಮ್ಮ ಅಹವಾಲನ್ನು ಹಿಂತೆಗೆದುಕೊಳ್ಳಲು ಅವಕಾಶವಿರುವುದಿಲ್ಲ.
24. ಬಿಡ್‌ದಾರರು ಟೆಂಡರ್-ಕಂ-ಬಹಿರಂಗ ಹರಾಜಿನ ದಿನ ನಿಗದಿಪಡಿಸಿದ ಅವಧಿಯವರೆಗೆ ಟೆಂಡರ್ ಸ್ವೀಕರಿಸಲಾಗುವುದು. ಇದಾದ ನಂತರ ಟೆಂಡರ್‌ಗಳನ್ನು ಪರಿಶೀಲಿಸಿ, ಬಹಿರಂಗ ಹರಾಜಿನಲ್ಲಿ ಬಂದ ಸವಾಲು ಮತ್ತು ಟೆಂಡರ್‌ಗಳನ್ನು ಹೋಲಿಸಿ ನೋಡಲಾಗುವುದು. ಅವುಗಳ ಪೈಕಿ ಯಾವ ದರ ಹೆಚ್ಚಿದೆಯೋ ಅದನ್ನು ಗಣನೆಗೆ ತೆಗೆದುಕೊಳ್ಳಲಾಗುವುದು.
25. ವಿಧಿಸಿದ ಷರತ್ತಿಗನುಗುಣವಾಗಿ ಬಿಡ್‌ದಾರರು ವರ್ತಿಸದಿದ್ದಲ್ಲಿ ಅಂತಹವರ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹಾಗೂ ಹರಾಜು ಮಾಡುವ ಅಧಿಕಾರಿಯವರು ಪ್ರಸ್ತುತ ವಿಧಿಸಿದ ಷರತ್ತುಗಳನ್ನು ವಿಸ್ತರಿಸಿ ಅಥವಾ ಮಾರ್ಪಡಿಸಿ, ಹರಾಜಿನ ಸಮಯದಲ್ಲಿ ಪ್ರಚಾರಪಡಿಸುವ ಅಧಿಕಾರ ಹೊಂದಿರುತ್ತಾರೆ.

ಪಿ.ಆರ್. 579

**ಜಿ.ಎ.ಎನ್. ಕರ್ಕೀಕರ್**

ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

## ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಚಿಕ್ಕಮಗಳೂರು ವೃತ್ತ, ಚಿಕ್ಕಮಗಳೂರು

## ಅಧಿಸೂಚನೆ

**ಸಂಖ್ಯೆ: ಎ9/ಹರಾಜು/ಸಿಆರ್-1/2003-04, ದಿನಾಂಕ: 13ನೇ ಡಿಸೆಂಬರ್ 2004**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ನಮೂದಿಸಿದ ನಾಟಾ ಸಂಗ್ರಹಾಲಯಗಳಲ್ಲಿ ಲಭ್ಯವಿರುವ ಬೀಟೆ ಸಾಗುವಾನಿ ಇತರೆ ಜಾತಿಯ ನಾಟಾ ಹಾಗೂ ಸೌದೆಗಳನ್ನು ಡಿಪೋವಿನ ಮುಂದೆ ಸೂಚಿಸಿದ ದಿನಾಂಕದಂದು ಬಹಿರಂಗ ಹರಾಜು ಮಾರಾಟದಲ್ಲಿ ವಿಕ್ರಯಿಸಲು ಸಾಮಾನ್ಯ ಅವಗಾಹನೆಗಾಗಿ ಪ್ರಕಟಿಸಿದೆ.

| ಕ್ರ. ಸಂ. | ವಿಭಾಗದ ಮತ್ತು ಡಿಪೋದ ಹೆಸರು | ಹರಾಜು ದಿನಾಂಕ | ಹರಾಜಿಗಿಟ್ಟ ನಾಟಾ ಸೌದೆಯ ಅಂದಾಜು ಪ್ರಮಾಣ (ಘ.ಮೀ. ಗಳಲ್ಲಿ) | | | | | | |
|---|---|---|---|---|---|---|---|---|---|
| | | | ಬೀಟೆ | ಸಾಗುವಾನಿ | ಕಾಡು ಜಾತಿ | ಇತರೆ ಜಾತಿಯ ನಾಟ | ಬಿಲೆಟ್ಸ್ | ಸೌದೆ | ಪೋಲ್ಸ್ (ಸಂಖ್ಯೆ) |
| 1 | 2 | 3 | 4 | 5 | 6 | 7 | 8 | 9 | 10 |
| I | **ಚಿಕ್ಕಮಗಳೂರು ವಿಭಾಗ** | | | | | | | | |
| a) | ಕೇಂದ್ರ ಸರ್ಕಾರಿ ನಾಟಾ ಸಂಗ್ರಹಾಲಯ ಚಿಕ್ಕಮಗಳೂರು | 23.1.05 | 8.091 M3 | 20.966 | 51.726 | 12.081 (ನಂದಿ)<br>4.585 (ಹೊನ್ನೆ)<br>21.161 (ಮನ್ನಜಾತಿ ಸೈಜು)<br>14.503 (ಇತರೆ ಜಾತಿ ಸೈಜು)<br>2 (ಮಂಚ) | - | 28.812 (ಮನ್ನಾಜಾತಿ)<br>382.635 (ಕಾಡು ಜಾತಿ) | 42 (ಎ. ಗುಂಪಿನ ಸಾಗುವಾನಿ)<br>500 (ಬಿ. ಗುಂಪಿನ ಕಾ. ಜಾತಿ) |
| b) | ಕಡೂರು ಸರ್ಕಾರಿ ನಾಟಾ ಸಂಗ್ರಹಾಲಯ | 24.1.05<br>25.1.05 | 300.00 | 25.000 | 80.000 | 12.000 (ನಂದಿ)<br>1.000 (ಹೊನ್ನೆ)<br>5.000 (ಜಾಲಾರಿ)<br>12.000 (ಮನ್ನಾಜಾತಿ ಸೈಜ್) | - | 405.300 (ಮನ್ನಾ ಜಾತಿ)<br>40.000 (ಕಾಡು ಜಾತಿ) | 1500 (ಎ.ಗುಂಪಿನ ಸಾಗುವಾನಿ)<br>400 (ಬಿ. ಗುಂಪಿನ ಕಾಡು ಜಾತಿ)<br>1800 (ಕಾಡುಜಾತಿ) |
| II | **ಕೊಪ್ಪ ವಿಭಾಗ** | | | | | | | | |
| a) | ನರಸಿಂಹರಾಜಪುರ ಸರ್ಕಾರಿ ನಾಟಾ ಸಂಗ್ರಹಾಲಯ | 27.1.05<br>28.1.05 | 96.666<br>12.648 (ಖಾಸಗಿ) | 119.423 | - | 117.661 (ನಂದಿ)<br>97.445 (ಮತ್ತಿ)<br>775.530 (ಜಂಬೆ)<br>117.551 (ಹೊನ್ನೆ)<br>238.608 (ಅಕೇಶಿಯಾ ನಾಟಾ)<br>564.243 (ಇತರೆ ನಾಟಾ) | 304.000 (ಅಕೇಶಿಯಾ)<br>15.000 (ಸಿಲ್ವರ್ ಓಕ್) | 50.000 (ಬೀಟೆ)<br>500.000 (ಇತರೆ ಜಾತಿ) | 4580 (ಸಾಗುವಾನಿ)<br>11784 (ಅಕೇಶಿಯಾ) |

| ಕ್ರ. ಸಂ. | ವಿಭಾಗದ ಮತ್ತು ಡಿಪೋದ ಹೆಸರು | ಹರಾಜು ದಿನಾಂಕ | ಹರಾಜಿಗಿಟ್ಟ ನಾಟಾ ಸೌದೆಯ ಅಂದಾಜು ಪ್ರಮಾಣ | | | | | | (ಘ.ಮೀ. ಗಳಲ್ಲಿ) |
|---|---|---|---|---|---|---|---|---|---|
| | | | ಬೀಟೆ | ಸಾಗುವಾನಿ | ಕಾಡು ಜಾತಿ | ಇತರೆ ಜಾತಿಯ ನಾಟ | ಬಿಲೆಟ್ಸ್ | ಸೌದೆ | ಪೋಲ್ಸ್ (ಸಂಖ್ಯೆ) |
| b) | ಸಂಗಮೇಶ್ವರಪೇಟೆ ನಾಟಾ ಸಂಗ್ರಹಾಲಯ | 29.1.05<br>30.1.05 | 26.275<br>64.721<br>(ಖಾಸಗಿ) | 58.043 | | 28.983 (ಮತ್ತಿ)<br>19.086 (ಹೊನ್ನೆ)<br>29.556 (ನಂದಿ)<br>42.761 (ಜಂಬೆ)<br>236.565 (ಇತರೆ ಜಾತಿ ನಾಟಾ) | 1.000 (ಬೀಟೆ)<br>1.900 (ಸಾಗುವಾನಿ)<br>830.830 (ಅಕೇಶಿಯಾ) | 18.000 (ಬೀಟೆ)<br>12.380 (ಸಾಗುವಾನಿ)<br>157.000 (ಅಕೇಶಿಯಾ)<br>90.000 (ಇತರೆ ಜಾತಿ) | 19952 (ಸಾಗುವಾನಿ)<br>530 (ಅಕೇಶಿಯಾ) |

ಪಿ.ಆರ್. 580

**ಅರಣ್ಯ ಸಂರಕ್ಷಣಾಧಿಕಾರಿ**
ಚಿಕ್ಕಮಗಳೂರು ವೃತ್ತ, ಚಿಕ್ಕಮಗಳೂರು.

## ಕಾರ್ಯಪಾಲಕ ಅಭಿಯಂತರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ

## ಟೆಂಡರ್ ಕಾಲ ವಿಸ್ತರಣೆ ಅಧಿಸೂಚನೆ

## ನಂ. ಕಾನಿಅ/ರಾಹೆವಿ/ಚಿ/ಸ.ಇಂ.2/ಟೆಂಡರ್ ವಿಸ್ತರಣೆ/2004-05

**ವಿಷಯ:-** ಈ ಕಛೇರಿ ಟೆಂಡರ್ ಕಾಲ ವಿಸ್ತರಣೆ ಅಧಿಸೂಚನೆ ಸಂಖ್ಯೆ: ಇಎನ್‌ಹೆಚ್/ಸಿಟಿಎ/ಎಇ-2/ಟಿಎನ್‌ಡಿ/ಎನ್‌ಓಟಿಐ/ಎಕ್ಸ್‌ಟೆನ್ಷನ್/2004-05/3413, ದಿನಾಂಕ: 22.12.2004.

**ಉಲ್ಲೇಖ:-** 1. ಈ ಕಛೇರಿಯ ಟೆಂಡರು ಪ್ರಕಟಣೆ ಸಂಖ್ಯೆ: ಎನ್‌ಹೆಚ್‌ಡಿ/ಸಿಟಿಎ/ಎಇ-2/ಟಿಎನ್‌ಡಿ/ಎನ್‌ಓಟಿಐ/ಡಬ್ಲ್ಯೂಡಿ/2004-05/2668, ದಿನಾಂಕ: 6.11.2004.

2. ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು ಇವರ ಪತ್ರ ಸಂಖ್ಯೆ: ಪಿಡಬ್ಲ್ಯೂಡಿ/189/ಸಿಎನ್‌ಹೆಚ್/2004, ದಿನಾಂಕ: 22.12.2004.

ಮೇಲ್ಕಂಡ ಟೆಂಡರ್ ಪ್ರಕಟಣೆಯಲ್ಲಿ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು ಇವರ ಉಲ್ಲೇಖ (2)ರ ಆದೇಶದ ಮೇರೆಗೆ, ಈ ಕೆಳಕಂಡಂತೆ ಬದಲಾವಣೆಗಳನ್ನು ಮಾಡಲಾಗಿದೆ.

| | | |
|---|---|---|
| 1 | ಖಾಲಿ ಟೆಂಡರ್ ಫಾರಂಗಳಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ | 28.12.2004 (ಕಛೇರಿ ವೇಳೆಯಲ್ಲಿ) |
| 2 | ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ | 5.1.2005 ರಿಂದ 6.1.2005 (ಕಛೇರಿ ವೇಳೆಯಲ್ಲಿ) |
| 3 | ಭರ್ತಿ ಮಾಡಿದ ತಾಂತ್ರಿಕ ಮತ್ತು ಆರ್ಥಿಕ ಬಿಡ್‌ಗಳನ್ನು ಸ್ವೀಕರಿಸುವ ದಿನಾಂಕ | 10.1.2005 4.00 ಗಂಟೆಗೆ ಅಥವಾ ಮುಂದೆ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| 4 | ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | 10.1.2005 5.00 ಗಂಟೆಗೆ ಅಥವಾ ಮುಂದೆ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| 5 | ತಾಂತ್ರಿಕವಾಗಿ ಅರ್ಹವಾದ ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | 17.1.2004 5.00 ಗಂಟೆಗೆ ಅಥವಾ ಮುಂದೆ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |

ಉಳಿದಂತೆ ಯಾವುದೇ ಬದಲಾವಣೆಗಳಿರುವುದಿಲ್ಲ.

ಪಿ.ಆರ್. 581

ಕಾರ್ಯಪಾಲಕ ಅಭಿಯಂತರರು,
ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ.

## OFFICE OF THE DIRECTOR, DEPARTMENT OF MINES & GEOLOGY
## No. 49, Khanija Bhavan, Devraj Urs Road (Race Coure Road) Bangalore-560 001
## TENDER-CUM-AUCTION NOTICE
## NOTIFICATION No. DMG/STS/VHL-2/2004-05 Dated 22nd December 2004

It is notified for information of the General Public that the Department of Mines & Geology, Government of Karnataka, has proposed to dispose off the following unserviceable old vehicles parked in the premises of M/s Mysore Lamps Ltd., old Tumkur Road, Malleshwaram, Bangalore on "as is and where is basis" through tender-cum-public auction on 27.1.2005 at 11.00 AM at the above premises.

| Sl.No. | Vehicle No. | Make | Model |
|---|---|---|---|
| 1 | CAG 295 | Mahindra Jeep CJ 500 | 1982 |
| 2 | MER 3240 | Mahindra Jeep CJ 500 | 1978 |

And also the following unserviceable old vehicles truck mounted fast rig, PR-rig and Diamond Drill stationed in premises of Central Work Shop Ingaldhal, Chitradurga Taluk and District.

On "as is and where is basis" through tender-cum-public auction on 29.1.2005 at 11.30 AM.

| Sl.No. | Vehicle No. | Make | Model |
|---|---|---|---|
| 1 | CAA 3848 (Mounted with fast rig I.R-8/83) | Ashok Leyland Lorry | 1983 |
| 2 | Joy H.D-22 Diamond Drill | | |
| 3 | LY.38-1 Diamond Drill | | |
| 4 | PR-26 (percussion rig) | | |

1. The General public who intend to file sealed tenders may inspect these vehicles at the above premises between 10-30 AM to 5-00 PM on the working days. They are required to file separate tender for each one of the vehicles duly superscribing on the sealed covers the vehicle Number etc., Tender forms can be obtained from the office on all working days up to 4-00 PM from 17.1.2005 to 24.1.2005 on payment of the prescribed fee of Rs. 100.00 (not refundable) + taxes applicable as per rules.
2. The closed tender will be received in the office of the Director of Mines & Geology, 49, Khanija Bhavan, Devraj urs Road (Race Course Road) Bangalore-560 001 upto 4.00 PM on 25.1.2005.
3. The intending tenderers shall enclose a demand draft drawn in favour of 'Director of Mines and Geology' Bangalore for Rs. 3000.00 separately for each vehicle as Earnest Money Deposit along with the tender. The vehicle number in respect of which the Tender is submitted must be typed / written legibly on the sealed tender.
4. Those desirous of participating in public auction shall deposit the said amount of Rs. 3000.00 with the officer conducting the auction prior to the commencement of the auction either in cash or demand draft in favour of the 'Director of Mines and Geology' Bangalore and obtain an acknowledgement. In case the person who has submitted the sealed tender desires to participate in the public auction he too shall pay Rs. 3000.00 E.M.D. on the spot (through DD or cash) and participate in the auction.
5. The vehicles proposed for disposal will first be allowed for open auction bid one by one. The highest bid by open auction will be tallied with the offer in the sealed tender which will be opened on completion of open auction proceedings. The highest bidder in auction / tender shall be the successful bidder.
6. The successful bidder shall remit the 25% of the bid amount along with applicable taxes immediately on the close of auction. The successful bidder shall on the receipt of the approval of the department take delivery of the vehicle paying all dues within 15 days. If he fails to pay the balance amount with in 15 days all the amount deposited by the successful bidder shall be forfeited to Government and the next highest bidder/tenderer (whose E.M.D. will have been retained till that time) shall be asked to take delivery of the vehicle.
7. In case the second highest bidder/tenderer fails to take delivery of the vehicle within the stipulated time of further 15 days, his E.M.D. shall also be forfeited to Government.
8. The E.M.D. paid by the unsuccessful bidders, except the above first and second highest bidders/ tenderers shall be refunded immediately after the close of the auction.
9. The Director of Mines & Geology reserves the rights to accept or reject any or all offers/tenders without assigning any reasons thereof.

PR-582 **Director**

Department of Mines and Geology, Bangalore.

**DEPARTMENT OF PUBLIC INSTRUCTION, EDUCATION DEPARTMENT**

**FORM-I**

**[See Rule 9]**

**NOTIFICATION**

**Dated 7th December 2004**

Smt. **SHOBHA N. KAMATH** working as Assistant Mistress in the Education Department of / Office of Govt. High School, Sarakki, Bangalore-78 is permitted to change her name to **VIDYA MOHAN. M.**

Department of Public Instruction,

PD-191 Education Department.

**ಕರ್ನಾಟಕ ಮೃಗಾಲಯ ಪ್ರಾಧಿಕಾರ**

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83**

**ಸಂಕ್ಷಿಪ್ತ ಟೆಂಡರು ಪ್ರಕಟಣೆ**

**ಸಂಖ್ಯೆ: ಎ2/ಬಬಪಾ/ವಿಪಿ/2004-05, ದಿನಾಂಕ: 24ನೇ ಡಿಸೆಂಬರ್ 2004**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2005-2006ನೇ ಸಾಲಿಗೆ (ದಿನಾಂಕ: 1.4.2005 ರಿಂದ 31.3.2006 ರವರೆಗೆ) ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿನ ವಾಹನ ನಿಲ್ದಾಣದಲ್ಲಿ ಪ್ರವಾಸಿಗರ ವಾಹನಗಳನ್ನು ನಿಲ್ಲಿಸಲು ಮೃಗಾಲಯ ಪ್ರಾಧಿಕಾರವು ನಿಗದಿಪಡಿಸಿದ ದರದಲ್ಲಿ ವಾಹನ ನಿಲ್ದಾಣದ ಶುಲ್ಕ ಸಂಗ್ರಹಿಸಲು ಟೆಂಡರುಗಳನ್ನು ಆಹ್ವಾನಿಸಲಾಗಿದೆ.

ಸದರಿ ಟೆಂಡರಿನಲ್ಲಿ ಭಾಗವಹಿಸುವವರು ಟೆಂಡರು ಅರ್ಜಿಯನ್ನು ಮೊಹರು ಮಾಡಿದ ಲಕೋಟೆಯಲ್ಲಿ ಈ ಕಛೇರಿಗೆ ದಿನಾಂಕ: 18.2.2005 ರಂದು ಮಧ್ಯಾಹ್ನ 3.00 ಘಂಟೆ ಒಳಗಾಗಿ ಈ ಕೆಳಗೆ ಸಹಿ ಮಾಡಿರುವವರ ಕಛೇರಿಯಲ್ಲಿ ಸಲ್ಲಿಸಲು ತಿಳಿಸಲಾಗಿದೆ.

ಷರತ್ತುಗಳು:-

1. ಗುತ್ತಿಗೆದಾರರು ರೂ. 1.00 ಲಕ್ಷ (ಒಂದು ಲಕ್ಷ ರೂ.ಗಳು ಮಾತ್ರ) ಅನ್ನು ಠೇವಣಿಯಾಗಿ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಟೆಂಡರಿನೊಂದಿಗೆ ಈ ಕೆಳಗೆ ಸಹಿದಾರರ ಪದನಾಮದ ಹೆಸರಿನಲ್ಲಿ ಸಲ್ಲಿಸತಕ್ಕದ್ದು.
2. ಟೆಂಡರಿನಲ್ಲಿ ಭಾಗವಹಿಸುವವರು ತಮ್ಮ ವಿಳಾಸ ದಾಖಲೆ ತೋರಿಸಿ ರೂ. 500/- ಮತ್ತು ಅನ್ವಯಿಸುವ ತೆರಿಗೆಗಳನ್ನು ಪಾವತಿಸಿ ಟೆಂಡರು ಫಾರಂನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ: 11.2.2005 ರಿಂದ 18.2.2005 ರ ಮಧ್ಯಾಹ್ನ 12.00 ಘಂಟೆಯೊಳಗೆ ಪಡೆಯಬಹುದಾಗಿರುತ್ತದೆ.
3. ಇನ್ನೂ ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದಾಗಿರುತ್ತದೆ.

ಕಾರ್ಯನಿರ್ವಾಹಕ ನಿರ್ದೇಶಕರು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83.

## ZOO AUTHORITY OF KARNATAKA
## OFFICE OF THE EXECUTIVE DIRECTOR AND DEPUTY CONSERVATOR OF FORESTS
## Bannerghatta Biological Park, Bangalore-83
## BRIEF TENDER NOTIFICATION
## No. A2-BBP-VP-2004-2005, Date 24th December 2004

It is hereby notified for the general information of the public, that sealed tenders are invited and will be received by the Executive Director, Bannerghatta Biological Park, Bangalore or any other officer duly authorized by him, for license to operate the "Vehicle parking stand" at Bannerghatta Biological Park up to 3.00 PM on 18.2.2005. The tender period is from 1.4.2004 to 31.3.2006.

**Conditions:-**

1. The prescribed blank tender forms will be issued by the office of the undersigned from 11.2.2005 and upto 12.00 noon on 18.2.2005 on payment of Rs. 500/- plus taxes on production of address proof, during office hours on working days.
2. The tender should be accompanied with an EMD of Rs. 1.00 lakh (Rupees one lakh only) which shall be in the form of DD from any nationalized banks and DD should be in favour of the Executive Director, Bannerghatta Biological Park, Bangalore-83.
3. Other detailed conditions can be had from the office of the undersigned during office hours on working days.

Executive Director and Deputy Conservator of Forests,
PD-115 Bannerghatta Biological Park, Bangalore-83.

## ಕರ್ನಾಟಕ ಅರಣ್ಯ ಇಲಾಖೆ
## ಅರಣ್ಯ ಕೃಷಿಕರು, ಕೇಂದ್ರ ವಲಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ, ದೊರೆಸಾನಿಪಾಳ್ಯ, ಬೆಂಗಳೂರು-560 076
## ಮರು ಟೆಂಡರ್ ಕಮ್ ಹರಾಜು ಪ್ರಕಟಣೆ
## ಸಂಖ್ಯೆ: ಎ5-ಎಸ್ಎಎಸ್-ಬರ್ಸೆರಹಸ್ಕ್-ಸಿಆರ್-13-2004-05, ದಿನಾಂಕ: 25ನೇ ನವೆಂಬರ್ 2004

**ವಿಷಯ:** ಬರ್ಸೆರಹಸ್ಕ್ ಮುಂತಾದ ಅರಣ್ಯ ಉತ್ಪನ್ನಗಳನ್ನು ರೂಢಿಸುವ ಟೆಂಡರ್ ಹಾಗೂ ಹರಾಜು ಬಗ್ಗೆ.

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ತಪಶೀಲಿನಲ್ಲಿ ಸೂಚಿಸಿರುವ ಬರ್ಸೆರಹಸ್ಕ್‌ನ್ನು 2004 ಮತ್ತು 2005ನೇ ಸಾಲಿಗೆ (ಎರಡು ಫಸಲು ಅಂದರೆ ದಿನಾಂಕ: 31.8.2006 ರವರೆಗೆ ದಿನಾಂಕ: 7.1.2005 ರಂದು ಕೆಳಗೆ ಸಹಿ ಮಾಡಿದವರು ಅಥವಾ ಅವರಿಂದ ಅಧಿಕೃತ ಪಡಿಸಿದವರು ಹರಾಜು ನಿಬಂಧನೆಗಳಿಗೊಳಪಟ್ಟಂತೆ ಮರು ಟೆಂಡರ್ ಕಮ್ ಹರಾಜು ಮೂಲಕ ಬಹಿರಂಗವಾಗಿ ಮಾರಾಟ ಮಾಡುವರು. ಇಚ್ಛೆವುಳ್ಳವರು ಹರಾಜು ನಿಬಂಧನೆಗೊಳಪಟ್ಟಂತೆ ಭಾಗವಹಿಸಿ ಪಡೆಯಬಹುದು.

**ತಪಶೀಲು**

| ಕ್ರಮ ಸಂಖ್ಯೆ | ಸಂಶೋಧನಾ ವಲಯದ ಹೆಸರು | ಹರಾಜು ಮಾಡುವ ಸ್ಥಳ | ಹರಾಜಿಗೆ ಪ್ರಸ್ತಾಪಿಸಿದ ಅಂಶಗಳ ವಿವರ | | ಟೆಂಡರ್ ಫಾರಂ ಜೊತೆ ಲಗತ್ತಿಸಬೇಕಾದ ಠೇವಣಿ ಹರಾಜಿನ ಹಣ |
|---|---|---|---|---|---|
| | | | ವಸ್ತುಗಳ ವಿವರ | ಅಂದಾಜು ಪರಿಮಾಣ | |
| 1 | 2 | 3 | 4 | 5 | 6 |
| 1 | ಹೊಸಕೋಟೆ | ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ, ಬೆಂಗಳೂರು ದಿನಾಂಕ: 7.1.2005ರ ಮಧ್ಯಾಹ್ನ 3.00 ಗಂಟೆಗೆ, ಹರಾಜು ಮುಗಿದ ನಂತರ 4.00 ಗಂಟೆಗೆ, ಟೆಂಡರ್ ತೆಗೆಯಲಾಗುವುದು | 1) ಬರ್ಸೆರಹಸ್ಕ್‌ನ್ನು ಮರಗಳಿಂದ ಸಂಗ್ರಹಿಸುವ ಹಕ್ಕು 2004 ಮತ್ತು 2005ನೇ ಸಾಲಿಗೆ 1) ನಲ್ಲಾಳ್ - ಸಿ 2) ಗೊಟ್ಟಿಪುರ | 2.50 ಟನ್‌ಗಳು | 1) ಟೆಂಡರ್ ಫಾರಂ ಜೊತೆ 5000 ರೂ. ಮೊಬಲಗಿನ ಯಾವುದಾದರೂ ರಾಷ್ಟ್ರೀಯ ಬ್ಯಾಂಕ್‌ನಿಂದ ಪಡೆದ ಡಿಡಿ ಲಗತ್ತಿಸಬೇಕು 2) ಹರಾಜಿನಲ್ಲಿ ಭಾಗವಹಿಸುವವರು ರೂ. 5000 ನಗದು ಹಣವನ್ನು ಹರಾಜಿಗೆ ಮುಂಚಿತವಾಗಿ ಪಾವತಿಸುವುದು |

ಒಂದು ವೇಳೆ ದಿನಾಂಕ: 7.1.2005 ರಂದು ಟೆಂಡರ್ ಕಮ್ ಹರಾಜು ತೀರ್ಮಾನವಾಗದಿದ್ದಲ್ಲಿ, ಇದೇ ಮರು ಟೆಂಡರ್ ಕಮ್ ಹರಾಜು ಪ್ರಕಟಣೆ ಮತ್ತು ನಿಬಂಧನೆಗೊಳಪಟ್ಟಂತೆ ದಿನಾಂಕ: 14.1.2005 ರಂದು ಮಾರಾಟ ಮಾಡಲಾಗುವುದು. ಹೆಚ್ಚಿನ ಮಾಹಿತಿಗಾಗಿ ಕಛೇರಿ ವೇಳೆಯಲ್ಲಿ ಭೇಟಿ ನೀಡಿ ಪಡೆಯಬಹುದು.

ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು-560 076

## ಸಾಮಾನ್ಯ ನಿಬಂಧನೆಗಳು

1. ಆಸಕ್ತಿಯುಳ್ಳವರು ಮೊದಲು ಈ ವಿಭಾಗದಲ್ಲಿ 2004-2005ನೇ ಸಾಲಿಗೆ ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿರಬೇಕು. ಅಂತಹವರು ಮಾತ್ರ ಟೆಂಡರ್ ಹಾಗೂ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
2. ಮರು ಟೆಂಡರ್ ಕಮ್ ಹರಾಜಿಗೆ ಬೇಕಾದ ಹೆಚ್ಚಿನ ಮಾಹಿತಿಯನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದು.
3. ಟೆಂಡರ್ ನಮೂನೆಗಳನ್ನು ನಮೂನೆ ಒಂದಕ್ಕೆ ರೂ. 10.00 ಪ್ಲಸ್ ತೆರಿಗೆಗಳು ಒಟ್ಟು ರೂ. 12.00 ಗಳನ್ನು ಪಾವತಿಸಿ ದಿನಾಂಕ: 7.1.2005ರ 1.00 ಗಂಟೆಯೊಳಗೆ ಕಛೇರಿ ವೇಳೆಯಲ್ಲಿ ಪಡೆಯಬಹುದು.
4. ಆಸಕ್ತಿಯುಳ್ಳವರು ಹರಾಜಿನಲ್ಲಿ ಭಾಗವಹಿಸುವುದಕ್ಕೆ ಮುಂಚಿತವಾಗಿ ಅರಣ್ಯ ಸಂಪತ್ತಿಗೆ ಯಾವುದೇ ರೀತಿಯ ಹಾನಿಯುಂಟಾಗದಂತೆ ಎಚ್ಚರ ವಹಿಸಿ ಮಾರಾಟಕ್ಕೆ ಪ್ರಸ್ತಾಪಿಸಿದ ಫಸಲು ಬಿಡುವ ನೆಡುತೋಪನ್ನು ವೀಕ್ಷಿಸಬಹುದು.
5. ಟೆಂಡರ್ ನಮೂನೆಗೆ ರೂ. 2.00 ಕೋರ್ಟ್ ಫೀ ಸ್ಟಾಂಪನ್ನು ಅಂಟಿಸಿರಬೇಕು. ಟೆಂಡರ್ ನಮೂನೆಯ ಎಲ್ಲಾ ಕಾಲಂಗಳನ್ನು ಭರ್ತಿ ಮಾಡಿರಬೇಕು. ಮೇಲೆ ನಿಗದಿಪಡಿಸಿದ ಸಂಚಿತ ಠೇವಣಿಯ ಡಿ.ಡಿ ಯನ್ನು ಲಗತ್ತಿಸಿರಬೇಕು. ಇಲ್ಲದಿದ್ದ ಪಕ್ಷದಲ್ಲಿ ಇಂತಹ ಟೆಂಡರ್‌ನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸಲಾಗುವುದು.
6. ಟೆಂಡರ್‌ಗಳ ಮೊಹರು ಮಾಡಿದ ಲಕೋಟೆಗಳನ್ನು ತಪಶೀಲಿನಲ್ಲಿ ಸೂಚಿಸಿರುವ ದಿನಾಂಕದಂದು ಮಧ್ಯಾಹ್ನ 3.00 ಗಂಟೆಯವರೆಗೆ ಕಛೇರಿಯಲ್ಲಿಡುವ ನಿಗದಿತ ಟೆಂಡರ್ ಪೆಟ್ಟಿಗೆಯಲ್ಲಿ ಹಾಕುವುದು. ಹಾಗೂ ಮೊಹರು ಮಾಡಿದ ಟೆಂಡರ್‌ನ್ನು 4.00 ಗಂಟೆಗೆ ಹರಾಜಿನಲ್ಲಿ ಭಾಗವಹಿಸಿದ್ದ ಗುತ್ತಿಗೆದಾರರ ಸಮ್ಮುಖದಲ್ಲಿ ತೆಗೆದು ಬಂದ ದರಗಳನ್ನು ಪ್ರಚಾರಪಡಿಸಲಾಗುವುದು.
7. ಹಿಂದಿನ ಹರಾಜಿನಲ್ಲಿ ಅಥವಾ ಟೆಂಡರ್‌ನಲ್ಲಿ ಭಾಗವಹಿಸಿ ವಿಜೇತರಾಗಿ ಪಡೆದ ಫಸಲಿನ ಬಾಬ್ತು ಬಾಕಿ ಹೊಂದಿದ್ದು ಸಕಾಲದಲ್ಲಿ ಕಟ್ಟದೆ ಇರುವಂತಹ ಗುತ್ತಿಗೆದಾರರನ್ನು ಕಪ್ಪುಪಟ್ಟಿಯಲ್ಲಿರುವ ಗುತ್ತಿಗೆದಾರರನ್ನು ಟೆಂಡರ್ : ಹರಾಜಿನಲ್ಲಿ ಭಾಗವಹಿಸಲು ಅವಕಾಶ ನೀಡುವುದಿಲ್ಲ.
8. ಮಾರಾಟವನ್ನು ಅಂಗೀಕರಿಸುವುದು : ನಿರಾಕರಿಸುವುದು ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರ ಅಧಿಕಾರದಲ್ಲಿರುತ್ತದೆ.
9. ಅರಣ್ಯ ಉತ್ಪನ್ನಗಳನ್ನು ತಪಶೀಲಿನಲ್ಲಿ ಸೂಚಿಸಿದ ಸಂಶೋಧನಾ ಕೇಂದ್ರಗಳಿಂದ ಮಾತ್ರ ಸಂಗ್ರಹಿಸಿ ತೆಗೆದುಕೊಂಡು ಹೋಗಲು ನಿಯಮದಂತೆ ಅನುಮತಿ ನೀಡಲಾಗುವುದು.
10. ಹರಾಜನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸುವ ಪೂರ್ಣ ಅಧಿಕಾರ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರು ಪಡೆದಿರುತ್ತಾರೆ.
11. ವಿಜಯಿಯಾದ ಬಿಡ್ದುದಾರರು ಕರಾರು ಮಾಡಿಕೊಳ್ಳುವ ಸಮಯದಲ್ಲಿ ಭದ್ರತಾ ಠೇವಣಿಯಾಗಿ ಎನ್.ಎಸ್.ಸಿ ಯನ್ನು ಅರಣ್ಯ ಕಾಯ್ದೆ ಪ್ರಕಾರ ಸಲ್ಲಿಸಬೇಕು.
12. ತಪಶೀಲಿನಲ್ಲಿ ಸೂಚಿಸಿದ ಅಂಶಗಳ ಠೇವಣಿಯನ್ನು ನಗದು ರೂಪದಲ್ಲಿ ಪಾವತಿಸಿ ಹರಾಜಿಗೆ ಮುಂಚಿತವಾಗಿ ಸಲ್ಲಿಸಬೇಕು.
13. ಸಫಲರಾದ ಬಿಡ್‌ದಾರರು ಕರಾರು ಪತ್ರ ಮಾಡಿಕೊಂಡ ನಂತರ 2ನೇ ಕನಿಷ್ಟ ದರದ ಬಿಡ್‌ದಾರರ ಸಂಚಕಾರ ಠೇವಣಿಯನ್ನು ಕೋರಿಕೆ ಮೇರೆಗೆ ಹಿಂತಿರುಗಿಸಲಾಗುವುದು.
14. ವಿಜಯಿಯಾದ ಬಿಡ್ದುದಾರರು ಮಾರಾಟ ಮುಗಿದ ನಂತರ ಮಾರಾಟದ ಪೂರ್ಣ ಮೊತ್ತ ಮತ್ತು ಅನ್ವಯವಾಗುವ ಹಾಗೂ ಚಾಲ್ತಿಯಲ್ಲಿರುವ ಪೂರ್ತಿ ತೆರಿಗೆಗಳನ್ನು ಮಾರಾಟ ದಿನದಂದು ಪಾವತಿಸಬೇಕು. ಸಾಲ್ವೆನ್ಸಿ ಸರ್ಟಿಫಿಕೇಟ್ ಮತ್ತು ತೆರಿಗೆಗಳ ಕ್ಲಿಯರೆನ್ಸ್ ಸರ್ಟಿಫಿಕೇಟ್ ಹಾಜರುಪಡಿಸಿದಲ್ಲಿ ಹರಾಜಿನ ಅರ್ಧಭಾಗ ಹಣ ಹಾಗೂ ಪೂರ್ಣ ತೆರಿಗೆಗಳನ್ನು ಕಟ್ಟಬಹುದಾಗಿದೆ. ಬಾಕಿ ಹಣವನ್ನು 6 ತಿಂಗಳೊಳಗಾಗಿ ಪಾವತಿಸಬೇಕು.
15. ಬಹಿರಂಗ ಹರಾಜಿಗೆ ಇಟ್ಟಿರುವ ಅಂಶಗಳು ಹೆಚ್ಚಾಗಬಹುದು ಅಥವಾ ಕಡಿಮೆಯಾಗಬಹುದು. ಇದು ಇಲಾಖೆಯ ವಿವೇಚನೆಗೆ ಒಳಪಟ್ಟಿರುತ್ತದೆ.
16. ಗುತ್ತಿಗೆದಾರರು ಸೂರ್ಯೋದಯದ ನಂತರ ಹಾಗೂ ಸೂರ್ಯಾಸ್ತಮನಕ್ಕೆ ಮುಂಚೆ ಮಾರಾಟವಾದ ಅಂಶಗಳನ್ನು ಇಲಾಖಾ ರಹದಾರಿ ಮುಖಾಂತರ ಸಾಗಣೆ ಮಾಡತಕ್ಕದ್ದು.
17. ಮಾರಾಟ ಮಾಡಲಾದ ಸ್ವತ್ತುಗಳಲ್ಲದೆ ಇನ್ನಾವುದೇ ಸ್ವತ್ತುಗಳನ್ನು ಗುತ್ತಿಗೆದಾರರು ಮುಟ್ಟಬಾರದು.
18. ಈಗಾಗಲೇ ನೆಡುತೋಪು ನಿರ್ಮಾಣವಾಗಿದ್ದ ಸ್ಥಳಗಳಲ್ಲಿ ನೆಟ್ಟಿರುವ ಗಿಡಗಳಿಗೆ ಯಾವುದೇ ಹಾನಿಯಾಗದಂತೆ ಗುತ್ತಿಗೆದಾರರು ನೋಡಿಕೊಳ್ಳಬೇಕು. ಹಾನಿಯಾದಲ್ಲಿ ಗುತ್ತಿಗೆದಾರರು ನಷ್ಟ ಪರಿಹಾರವನ್ನು ಮತ್ತು ಅರಣ್ಯ ಕೃಷಿಕರು ವಿಧಿಸುವ ದಂಡವನ್ನು ಕಟ್ಟಬೇಕಾಗುತ್ತದೆ.

ಪಿ.ಆರ್. 583 ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು-560 076

## ಜಲ ಸಂಪನ್ಮೂಲ ಇಲಾಖೆ

### ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ನಂ. 4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ

### ಅಲ್ಪಾವಧಿ ಟೆಂಡರ್ ಪ್ರಕಟಣೆ-2004-05

ಮೊಹರಾದ ಶೇಕಡವಾರು ಟೆಂಡರ್‌ಗಳನ್ನು ನಿಗದಿತ ನಮೂನೆಯಲ್ಲಿ ದ್ವಿಪ್ರತಿಗಳಲ್ಲಿ ಈ ಕೆಳಕಾಣಿಸಿರುವ ಕಾಮಗಾರಿಗಳಿಗೆ ನೋಂದಾಯಿಸಲ್ಪಟ್ಟಿರುವ ಅರ್ಹ ಗುತ್ತಿಗೆದಾರರಿಂದ ಕರ್ನಾಟಕ ರಾಜ್ಯಪಾಲರ ಪರವಾಗಿ ಕಾರ್ಯಪಾಲಕ ಇಂಜಿನಿಯರ್ ನಂ. 4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ ಇವರಿಂದ ಆಹ್ವಾನಿಸಲಾಗಿದೆ.

ತುಂಬಲಾದ ಟೆಂಡರ್‌ಗಳನ್ನು ದಿನಾಂಕ: 29.1.2005 ಸಂಜೆ 4.00 ಗಂಟೆಗೆ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ಹಾಗೂ ಟೆಂಡರ್‌ಗಳನ್ನು ಸಾಧ್ಯವಾದಲ್ಲಿ ಅದೇ ದಿನ ಸಂಜೆ 4.30 ಗಂಟೆಗೆ ಅಥವಾ ಇನ್ನಾವುದೇ ದಿನದಂದು ಕಛೇರಿಯಲ್ಲಿ ಹಾಜರಿರುವ ಟೆಂಡರ್‌ದಾರರ ಅಥವಾ ಇನ್ನಾವುದೇ ನೋಂದಾಯಿತ ಗುತ್ತಿಗೆದಾರರ ಸಮಕ್ಷಮದಲ್ಲಿ ತೆರೆಯಲಾಗುವುದು.

| | | |
|---|---|---|
| 1 | ನಿಗದಿತ ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕ | 24.1.05 ಸಂಜೆ 5.30 ರವರೆಗೆ |
| 2 | ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ | 28.1.05 |
| 3 | ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ | 29.1.05 |
| 4 | ಕೆಲಸವನ್ನು ಮುಗಿಸುವ ಅವಧಿ | ಎರಡು ತಿಂಗಳು |
| 5 | ಟೆಂಡರ್ ಕರೆ | ಒಂದನೇ ಕರೆ |

ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು. ಟೆಂಡರ್‌ನಲ್ಲಿ ಸೂಚಿಸಿರುವ ದಿನಾಂಕಗಳು ರಜಾ ದಿನವೆಂದು ಘೋಷಿಸಲ್ಪಟ್ಟರೆ ಮುಂದಿನ ಕೆಲಸದ ದಿನವನ್ನು ಟೆಂಡರಿನಲ್ಲಿ ತಿಳಿಸಿದ ದಿನಾಂಕದ ಬದಲಾಗಿ ಪರಿಗಣಿಸಲಾಗುವುದು.

| ಕ್ರಮ ಸಂಖ್ಯೆ | ಕೆಲಸದ ಹೆಸರು | ಟೆಂಡರ್‌ಗೆ ಇಡಲಾದ ಮೊತ್ತ | ಇ.ಎಂ.ಡಿ | ಟೆಂಡರ್ ಫಾರಂ ಬೆಲೆ (ತೆರಿಗೆಗಳು ಪ್ರತ್ಯೇಕ) | ಗುತ್ತಿಗೆದಾರರ ದರ್ಜೆ |
|---|---|---|---|---|---|
| 1 | 2 | 3 | 4 | 5 | 6 |
| | | Rs. | Rs. | Rs. | |
| 1 | Improvements and metalling to road from Kambadal Hosur to Basappas and Sharifjan. S plat In Sy. No. 27, 40 and 41 of Kambadal Hosur Village | 2,90,999/- | 7,500/- | 300/- | Class III and above |
| 2 | Formation and Improvements to road from B.H. Road to Bommenahalli road in M.P.M. From by the side of Oswal Farm | 4,36,388/- | 11,250/- | 300/- | -do- |
| 3 | Impts to road from Gopala to Siddeswara and Beereswara colony | 2,18,124/- | 5,625/- | 300/- | -do- |
| 4 | Impts to road from Kenchenahalli Kalinganahalli to Guddadahalli Halla | 3,37,303/- | 8,750/- | 300/- | -do- |

**ಸೂಚನೆಗಳು:**

1. ನಿಗದಿತ ಟೆಂಡರ್ ಫಾರಂನಲ್ಲಿ ಕಾಮಗಾರಿಯ ವಿವರಗಳನ್ನು ಮತ್ತು ಟೆಂಡರಿನ ಷರತ್ತುಗಳನ್ನು ಒದಗಿಸಲಾಗಿದೆ. ಟೆಂಡರುದಾರರು ಹಾಕುವಾಗ ಪಾಲಿಸಬೇಕಾಗಿರುವ ನಿಬಂಧನೆಗಳನ್ನು ಸಹ ಒದಗಿಸಲಾಗಿದೆ. ಅದರಂತೆ ಟೆಂಡರ್ ಹಾಕಬೇಕು.
2. ಇ.ಎಂ.ಡಿ. ಮೊತ್ತವನ್ನು ಕರ್ನಾಟಕ ಸರ್ಕಾರದ ಟ್ರಜರಿ ಚಲನ್ ಡಿಮ್ಯಾಂಡ್ ಡ್ರಾಫ್ಟ್ ನ್ಯಾಷನಲ್ ಸೇವಿಂಗ್ಸ್ ಸರ್ಟಿಫಿಕೇಟ್ ರೂಪದಲ್ಲಿ ಸೂಚಿಸಿರುವ ಮೊತ್ತಕ್ಕೆ ಕಾರ್ಯಪಾಲಕ ಇಂಜಿನಿಯರ್, ನಂ. 4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ ಇವರ ಹೆಸರಿನಲ್ಲಿ ಪಾವತಿಸಿರಬೇಕು. ತಪ್ಪಿದಲ್ಲಿ ಅಂತಹ ಟೆಂಡರುಗಳನ್ನು ತಿರಸ್ಕರಿಸಲಾಗುವುದು.
3. ಯಾವುದೇ ನಿಬಂಧನೆಗಳನ್ನು ಒಳಗೊಂಡ ಟೆಂಡರುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ.
4. ಠೇವಣಿ ಕ್ರಮಬದ್ಧತೆಯು (ವ್ಯಾಲಿಡಿಟಿ ಪೀರಿಯಡ್) ತೊಂಭತ್ತು ದಿನಗಳ ಅವಧಿಯನ್ನು ಒಳಗೊಂಡಿರಬೇಕಾಗಿರುತ್ತದೆ.
5. ಇತ್ತೀಚಿನ ಸೇಲ್ ಟ್ಯಾಕ್ಸ್ ಕ್ಲಿಯರೆನ್ಸ್ ಸರ್ಟಿಫಿಕೇಟನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು.
6. ಟೆಂಡರನ್ನು ಯಾವುದೇ ಕಾರಣವಿಲ್ಲದೆ ಮುಂದೂಡುವ, ತಿರಸ್ಕರಿಸುವ ಅಧಿಕಾರವು ಕಾರ್ಯಪಾಲಕ ಅಭಿಯಂತರವರಿಗೆ ಇರುತ್ತದೆ.
7. ಇಲಾಖಾವತಿಯಿಂದ ಯಾವುದೇ ಕಾಮಗಾರಿ ನಿರ್ಮಾಣ ವಸ್ತುಗಳನ್ನು ವಿತರಿಸಲಾಗುವುದಿಲ್ಲ. ಗುತ್ತಿಗೆದಾರರೇ ಸ್ವಂತ ಏರ್ಪಾಟು ಮಾಡಿಕೊಳ್ಳತಕ್ಕದ್ದು.
8. ಜೇಷ್ಠತೆಯ ಆಧಾರದ ಮೇಲೆ ಗುತ್ತಿಗೆದಾರರ ವಿಪತ್ರಗಳನ್ನು ಪಾವತಿಸಲಾಗುವುದು.
9. ಖಾಲಿ ಟೆಂಡರ್ ಪುಸ್ತಕವನ್ನು ಖರೀದಿಸಿ ಕ್ರಮಬದ್ಧವಾಗಿ ಟೆಂಡರ್ ಹಾಕದೇ ಇದ್ದ ಮತ್ತು ಮೂರು ಬಾರಿ ಪುನರಾವರ್ತನೆ ಮಾಡಿದ ಗುತ್ತಿಗೆದಾರರು ಮುಂದಿನ ಟೆಂಡರ್‌ಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.

ಪಿ.ಆರ್. 584

**ಎ. ಮಲ್ಲೇಗೌಡ**
ಕಾರ್ಯಪಾಲಕ ಅಭಿಯಂತರರು,
ನಂ. 4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.

## KARNATAKA FOREST DEPARTMENT
## BRIEF TENDER NOTIFICATION OF REVIEW & EVALUATION

**Office of the Chief Conservator of Forests, Social Forestry, Aranya Bhavan, Bangalore-03**
**No. A1-SF-R&E CR-9/2004-2005, Dated 22nd December 2004**

It is hereby notified for the information of the general public that **Sealed Tenders are invited for Review & Evaluation of the programmes of the on going JBIC assisted Forestry & Environment Project for Eastern Plain of Karnataka and Vanasamvardhane Yojane** from the recognised, experienced Institutions / Organisations / Universities / Government Departments in the Country. The tenders will be received by the Chief Conservator of Forests, Social Forestry, upto 4.00 p.m. on 27th January, 2005.

Tender bulletin along with Terms of Reference for Review & Evaluation of the programmes will be available in the office of the Chief Conservator of Forests, Social Forestry, 6th Floor, Aranya Bhavan, 18th Cross, Malleshwaram, Bangalore-560 003 (Phone 080-23343090) upto 12 noon on 27.1.2005 on all working days, during office hours on payment of Rs. 250/- as taxes for each tender document. This should be paid in the form of Demand Draft drawn in favour of the Chief Conservator of Forests, Social Forestry, Bangalore.

**Terms and Conditions:**

1. Tenders will be accepted only from the Institutions / Organisations / Universities / Government Departments who have a minimum experience of 5 years in the field of Review and Evaluation of Forestry Projects. The tender document should accompany the details of their experience.

